KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಜೂನ್ ೧೨, ೨೦೦೮ (ಜೇಷ್ಠ ೨೨, ಶಕ ವರ್ಷ ೧೯೩೦) | ಸಂಚಿಕೆ ೨೪ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ವೈ.ಗಂಗಿರೆಡ್ಡಿ, ಪಿ.ಐ., ಬೆಳ್ತಂಗಡಿ ವೃತ್ತ ಅವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕೃತ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರ ಆದೇಶ ಸಂಖ್ಯೆ:ಶಿಕ್ಷಾಪಟ್ಟಿ/105/2006, ದಿನಾಂಕ:05-12-2006
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ-3/13/ಪವ/2007, ದಿನಾಂಕ:29-03-2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:29-08-2007
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ(8)61/2007-08, ದಿನಾಂಕ:07-12-2007

**ಪ್ರಸ್ತಾವನೆ:**

ಶ್ರೀ ವೈ.ಗಂಗಿರೆಡ್ಡಿ, ಪಿ.ಐ., ಬೆಳ್ತಂಗಡಿ ವೃತ್ತ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

ಶ್ರೀ ವೈ.ಗಂಗಿರೆಡ್ಡಿ, ಪಿ.ಐ, ಬೆಳ್ತಂಗಡಿ ವೃತ್ತ ರವರು ದಿನಾಂಕ:13–10–2006 ರಂದು ರಾತ್ರಿ ಮೇಲಾಧಿಕಾರಿಯವರೊಂದಿಗೆ ದೂರವಾಣಿಯಲ್ಲಿ ಅನುಚಿತ ಹಾಗೂ ಅಸಂಬದ್ಧ ರೀತಿಯಲ್ಲಿ ಮಾತನಾಡಿ ಉದ್ಧಟತನದಿಂದ ವರ್ತಿಸಿ ತೀವ್ರ ಅಸಿಸ್ತು, ದುರ್ನಡತೆ ಪ್ರದರ್ಶಿಸಿರುವುದು ಅಲ್ಲದೇ ದಿನಾಂಕ: 13–10–2006 ರಂದು ಸಂಜೆ ಬಂಟ್ವಾಳದಲ್ಲಿ ನಡೆದ ಅಹಿತರ ಘಟನೆಯ ಸಂಬಂಧ ಎಲ್ಲಾ ಅಧಿಕಾರಿಗಳು ರಾತ್ರಿ 12.00 ಗಂಟೆಯವರೆಗೆ ಸರಹದ್ದಿನಲ್ಲಿ ಗಸ್ತು ನಡೆಸುವಂತೆ ಆದೇಶಿಸಿದ್ದರೂ ಕೋಮಾ ಸೂಕ್ಷ್ಮ ಪರಿಸ್ಥಿಯಲ್ಲಿ ಕರ್ತವ್ಯ ನಿರ್ವಹಿಸದೇ ಮೇಲಾಧಿಕಾರಿಗಳ ಆದೇಶವನ್ನು ಧಿಕ್ಕರಿಸಿ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿ ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:05-12-2006ರ ಆದೇಶದಲ್ಲಿ ಅರ್ಜಿದಾರರಿಗೆ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ತದ ನಂತರ ಗಳಿಸುವ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮೂರು ತಿಂಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:**29-03-2007**ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿಯವರು ಮೇಲಧಿಕಾರಿಗಳ ಜೊತೆ ದೂರವಾಣಿಯಲ್ಲಿ ಅವುಚಿತವಾಗಿ ವರ್ತಿಸಿರುವುದು ಸಾಬೀತಾಗಿರುತ್ತದೆ. ಅಲ್ಲದೆ ಕರ್ತವ್ಯದಲ್ಲಿ ದುರ್ನಡತೆ ಎಸಗಿ, ನಿರ್ಲಕ್ಷ್ಯತನ ಎಸಗಿರುವುದು ಸಾಬೀತಾಗಿದ್ದು, ಇದನ್ನು ಬದಲಾಯಿಸಲು ಸಮಂಜಸವಾದ ಕಾರಣಗಳನ್ನು ಒದಗಿಸಿರುವುದಿಲ್ಲ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 09 ಪೊಸಿಅ 2008 ಬೆಂಗಳೂರು, ದಿನಾಂಕ: 21ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವೈ.ಗಂಗಿರೆಡ್ಡಿ, ಪಿ.ಐ., ಬೆಳ್ತಂಗಡಿ ವೃತ್ತ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ..ಆರ್. 159

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಿ.ಪಿ.ಬಾಲಚಂದ್ರೇಗೌಡ, ಪಿಎಸ್ಐ, ಮಂಗಳೂರು ಪೂರ್ವ ಪೊಲೀಸ್ ಠಾಣೆ ಅವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ, ಮಂಗಳೂರು, ಇವರ ಆದೇಶ ಸಂಖ್ಯೆ:ಶಿಕ್ಷಾಪಟ್ಟಿ/**31/2006**, ದಿನಾಂಕ:**23-05-2006**

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ-**3/35/**ಪವ**/2006**, ದಿನಾಂಕ:**26-09-2006**

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:**13-09-2007**

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು**(2)94/2007-08**, ದಿನಾಂಕ:**07-12-2007**

* * *

**ಪ್ರಸ್ತಾವನೆ:**

ಶ್ರೀ ಸಿ.ಪಿ.ಬಾಲಚಂದ್ರೇಗೌಡ, ಪಿಎಸ್ಐ, ಮಂಗಳೂರು ಪೂರ್ವ ಪೊಲೀಸ್ ಠಾಣೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ)ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ **7** ರಡಿ ದೋಷಾರೋಪಣ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

ಶ್ರೀ ಸಿ.ಪಿ.ಬಾಲಚಂದ್ರೇಗೌಡ, ಪಿಎಸ್ಐ, ಮಂಗಳೂರು ಪೂರ್ವ ಪೊಲೀಸ್ ಠಾಣೆ (ಹಿಂದೆ ವಿಟ್ಲ ಪೊಲೀಸ್ ಠಾಣೆ)- ಸುರತ್ಕಲ್ ಪೊಲೀಸ್ ಠಾಣಾ ಮೊ.ಸಂ.**150/04** ಕಲಂ **420** ಐಪಿಸಿ ಪ್ರಕರಣದಲ್ಲಿ ಸಮರ್ಪಕ ರೀತಿಯಲ್ಲಿ ತನಿಖೆ ನಡಸದೆ ತೀವ್ರ ಕರ್ತವ್ಯ ಲೋಪವೆಸಗಿರುವುದಲ್ಲದೆ ಆರೋಪಿಗೆ ಸಹಾಯ ಮಾಡುವ ಉದ್ದೇಶದಿಂದ ಪ್ರಕರಣದ ತನಿಖೆಯಲ್ಲಿ ಅನಗತ್ಯ ವಿಳಂಬ ಮಾಡಿ ಕರ್ತವ್ಯದಲ್ಲಿ ಬೇಜವಾಬ್ದಾರಿ, ನಿರ್ಲಕ್ಷ್ಣತೆ ಪ್ರದರ್ಶಿಸಿರುವಿರಿ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ, ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:**23-05-2006**ರ ಆದೇಶದಲ್ಲಿ ಅರ್ಜಿದಾರರರಿಗೆ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ

ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:26-09-2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮುಖ್ಯ ಕಡತ ಇವರ ಬಳಿ ಇದ್ದು, ದಾಖಲೆಗಳು ಲಭ್ಯವಿದ್ದರೂ ಅವುಗಳನ್ನು ಆರೋಪಿಗೆ ಸಹಾಯ ಮಾಡುವ ಉದ್ದೇಶದಿಂದ ಕೈಬರಹ ತಜ್ಞರಿಗೆ ಕಳುಹಿಸಲು ಉದ್ದೇಶ ಪೂರ್ವಕವಾಗಿಯೇ ವಿಳಂಬ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೆ ದಿನಾಂಕ:16-04-2005 ರಂದು ಬೇರೆ ಪ್ರಕರಣಕ್ಕೆ ಸಂಬಂಧಿಸಿದಂತೆ, ಆರೋಪಿತ ಅಧಿಕಾರಿಯು ಅಮಾನತ್ತುಗೊಂಡ ಅನಂತರ ಬೇರೆ ಕಡೆಗೆ ವರ್ಗಾವಣೆ ಆಗುವವರೆಗೆ ಫಿರ್ಯಾದುದಾರರಿಂದ ವಶಪಡಿಸಿಕೊಂಡ ದಾಖಲೆಗಳನ್ನು ಪೊಲೀಸ್ ನಿರೀಕ್ಷಕರಿಗೆ ಹಸ್ತಾಂತರಿಸದೆ ಆರೋಪಿತರಿಗೆ ಸಹಾಯ ಮಾಡುವ ಉದ್ದೇಶದಿಂದ ತನಿಖೆಯನ್ನು ವಿಳಂಬಗೊಳಿಸಲು ಕಾರಣರಾಗಿರುತ್ತಾರೆ. ಸದರಿಯವರ ಮೇಲಿನ ಆಪಾದನೆಗೆ ತಕ್ಕಂತೆ ಶಿಸ್ತು ಪ್ರಾಧಿಕಾರಿಯು ಶಿಕ್ಷೆ ವಿಧಿಸಿದ್ದು, ಇದನ್ನು ರದ್ದುಪಡಿಸಲು ಕಾರಣಗಳು ಇರುವುದಿಲ್ಲ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 01 ಪೊಸಿಅ 2008 ಬೆಂಗಳೂರು, ದಿನಾಂಕ: 21ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಪಿ.ಬಾಲಚಂದ್ರೇಗೌಡ, ಪಿಎಸ್ಐ, ಮಂಗಳೂರು ಪೂರ್ವ ಪೊಲೀಸ್ ಠಾಣೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 163

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಧಾನೇಶ್ ರಾವ್, ಪಿ.ಐ., ಸಿ.ಓ.ಡಿ., ಬೆಂಗಳೂರು ಅವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಪೂರ್ವ ವಿಭಾಗ, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:138/ಡಿಇ/ಆರ್- 7/ಪೂ/2005, ದಿನಾಂಕ:07-04-2007

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:42/ಅಪೀಲು/ 2007, ದಿನಾಂಕ:14-06-2007

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:19-06-2007

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ(8)35/2007-08, ದಿನಾಂಕ:13-12-2007

* * *

**ಪ್ರಸ್ತಾವನೆ:**

ಶ್ರೀ ಎಸ್.ಧಾನೇಶ್ ರಾವ್, ಪಿ.ಐ., ಸಿ.ಓ.ಡಿ., ಬೆಂಗಳೂರು ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

ಶ್ರೀ ಎಸ್.ಧಾನೇಶ್ ರಾವ್, ಪಿಐ, ಸಿಓಡಿ, ಬೆಂಗಳೂರು ರವರು ದಿನಾಂಕ:03–12–05ರಂದು ಶ್ರೀ ಸುಬ್ಬರಾವ್, ಪಿಸಿ 4745 ಮತ್ತು ಶ್ರೀ ಮಲ್ಲಿಕಾರ್ಜುನಪ್ಪ, ಪಿಸಿ 7181 ರವರೊಂದಿಗೆ ವಿಮಾನ ನಿಲ್ದಾಣ ಪೊಲೀಸ್ ಠಾಣೆಯ 2ನೇ ಗಸ್ತಿಗೆ ನೇಮಕ ಮಾಡಲಾಗಿತ್ತು. ಆ ದಿನ ರಾತ್ರಿ ಗಸ್ತು ಉಸ್ತುವಾರಿಗೆ ಶ್ರೀ ಪ್ರೇಮ್ ಕುಮಾರ್, ಎ.ಎಸ್.ಐ ರವರನ್ನು ನೇಮಿಸಲಾಗಿತ್ತು. ಆ ದಿನ ರಾತ್ರಿ 11–00 ಗಂಟೆಗೆ ವಿಮಾನ ನಿಲ್ದಾಣ ರಸ್ತೆಯಲ್ಲಿರುವ ಕೃಪಾ ಬಾರ್‌ನಲ್ಲಿ ಅಕ್ರಂ ಮತ್ತು ಕಲೀಮ್ ಮದ್ಯಪಾನ ಮಾಡಿ ಬಿಲ್ಲಿನ ಪೈಕಿ ರೂ.10/– ಕಡಿಮೆ ಕೊಟ್ಟ ವಿಷಯದಲ್ಲಿ ಜಗಳವಾಗಿ ಬಾರ್‌ನ ಸಪ್ಲೆಯರ್ ಜನಾರ್ಧನ್, ಪ್ರಸನ್ನ, ಕೃಷ್ಣಮೂರ್ತಿ ಅಕ್ರಂಗೆ ದೊಣ್ಣೆಯಿಂದ ಹೊಡೆದ ಪರಿಣಮ ಪ್ರಜ್ಞಾಹೀನವಾಗಿದ ಅಕ್ರಂನನ್ನು ವಿಷಯ ತಿಳಿದ ಪ್ರೇಮ್ ಕುಮಾರ್ ಮತ್ತು ಸುಬ್ಬರಾವ್ ಚಿಕಿತ್ಸೆಗಾಗಿ ಆಸ್ಪತ್ರೆಗೆ ಸೇರಿಸಿರುವುದಿಲ್ಲ ಹಾಗೂ ಜೊತೆಗಾರ ಕಲೀಂನ ಹೇಳಿಕೆ ಪಡೆಯದೇ ಕರ್ತವ್ಯ ಲೋಪವೆಸಗಿರುತ್ತಾರೆ. ದಿನಾಂಕ: 07–12–05ರಂದು ಶ್ರೀ ನಾಗಯ್ಯ, ಪಿ.ಎಸ್.ಐ ರವರು ತನಿಖೆ ಮುಂದುವರಿಸಿದ್ದು ಆರೋಪಿಗಳಾದ ಪ್ರಸನ್ನ,ಜನಾರ್ಧನ್,ಕೃಷ್ಣಮೂರ್ತಿ ರವರನ್ನು ದಸ್ತಗಿರಿ ಮಾಡಿ ನ್ಯಾಯಾಲಯಕ್ಕೆ ಹಾಜರುಪಡಿಸಿ,

ನ್ಯಾಯಾಲಯದ ಬಂಧನಕ್ಕೆ ಒಳಪಡಿಸಿ ನಂತರ ಬಿಡುಗಡೆ ಹೊಂದಿರುತ್ತಾರೆ. ದಿನಾಂಕ:10–12–05ರಂದು ಗಾಯಾಳು ಅಕ್ರಂ ಶೀಫಾ ಆಸ್ಪತ್ರೆಯಲ್ಲಿ ಮೃತಪಟ್ಟಿರುತ್ತಾರೆ. ಆ ದಿನ ಹಲಸೂರು ಹಾಗೂ ವಿಮಾನ ನಿಲ್ದಾಣ ಉಪ ವಿಭಾಗದ ರಾತ್ರಿ ಗಸ್ತಿನ ಉಸ್ತುವಾರಿ ಅಧಿಕಾರಿಯಾಗಿದ್ದು, ಠಾಣಾವ್ಯಾಪ್ತಿಗೆ ಸಂಬಂಧಿಸಿದ ಘಟನೆಯ ಬಗ್ಗೆ ನಿಮ್ಮ ಕೈಕೆಳಗೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಆದೇಶ ನೀಡುವಲ್ಲಿ ವಿಫಲರಾಗಿ ಕರ್ತವ್ಯದಲ್ಲಿ ಬೇಜವಾಬ್ದಾರಿ, ಸೇವಾ ದುರ್ನಡತೆಯನ್ನು ಪ್ರದರ್ಶಿಸಿರುವಿರಿ

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಪೂರ್ವ ವಿಭಾಗ, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: **07-04-2007**ರ ಆದೇಶದಲ್ಲಿ ಅರ್ಜಿದಾರರರಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ಅನಂತರದ ಬಡ್ತಿಗಳಿಗೆ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ನಗರ, ಇವರು ಮೇಲ್ಮನವಿಯನ್ನು ಪುರಸ್ಕರಿಸಿ, ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:**14-06-2007**ರ ಆದೇಶದಲ್ಲಿ ಶಿಸ್ತು ಅಧಿಕಾರಿಯವರು ವಿಧಿಸಿರುವ ಶಿಕ್ಷೆಯನ್ನು ಮಾರ್ಪಾಡು ಮಾಡಿ, ಮೇಲ್ಮನವಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ **6** ತಿಂಗಳ ಕಾಲ ಮುಂದೂಡಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮ ಅಧೀನ ಸಿಬ್ಬಂದಿಗೆ ಸೂಕ್ತ ಮಾರ್ಗದರ್ಶನ ನೀಡದೇ, ಕರ್ತವ್ಯಲೋಪ ಎಸಗಿರುವುದರಿಂದ ಶಿಸ್ತು ಪ್ರಾಧಿಕಾರಿಯು ಸರಿಯಾದ ಶಿಕ್ಷೆ ವಿಧಿಸಿದೆ. ಆದರೆ ಮೇಲ್ಮನವಿ ಪ್ರಾಧಿಕಾರಿಯು ಇವರ ದೀರ್ಘ ಸೇವೆಯನ್ನು ಗಮನದಲ್ಲಿಟ್ಟುಕೊಂಡು ಕಡಿಮೆ ಪ್ರಮಾಣದ ಶಿಕ್ಷೆ ವಿಧಿಸಿದೆ. ಆದ್ದರಿಂದ, ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 391 ಪೊಸಿಅ 2007 ಬೆಂಗಳೂರು, ದಿನಾಂಕ: 10ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಧಾನೇಶ್ ರಾವ್, ಪಿ.ಐ., ಸಿ.ಓ.ಡಿ., ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 152 ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎ.ರಾಜು, ಪಿ.ಎಸ್.ಐ., ಶಿಕಾರಿಪುರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಹಾಲಿ ವರ್ತೂರು ಪೊಲೀಸ್ ಠಾಣೆ, ಬೆಂಗಳೂರು ನಗರ ಅವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ**(4)**ಶಿಕ್ಷೆ:**84:2006**, ದಿನಾಂಕ:**21-10-2006**

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:**39/**ಅಪೀಲು**/**ಸಿಬ್ಬಂದಿ**-2/2006-07,** ದಿನಾಂಕ:**05-03-2007**

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:**01-08-2007**

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು**(2)63/2007-08**, ದಿನಾಂಕ:**19-12-2007**

* * *

**ಪ್ರಸ್ತಾವನೆ:**

ಶ್ರೀ ಎ.ರಾಜು, ಪಿ.ಎಸ್.ಐ., ಶಿಕಾರಿಪುರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಹಾಲಿ ವರ್ತೂರು ಪೊಲೀಸ್ ಠಾಣೆ, ಬೆಂಗಳೂರು ನಗರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ **1965** ರ ನಿಯಮ **7** ರಡಿ ದೋಷಾರೋಪಣ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

ಶ್ರೀ ಎ.ರಾಜು. ಪಿ.ಎಸ್.ಐ., ಶಿಕಾರಿಪುರ ಪೊಲೀಸ್ ಠಾಣೆಯಲ್ಲಿ, ಶಿವಮೊಗ್ಗ ಜಿಲ್ಲೆ, (ಹಾಲಿ ವರ್ತೂರು ಪೊಲೀಸ್ ಠಾಣೆ, ಬೆಂಗಳೂರು ನಗರ) ದಿನಾಂಕ:**13-06-2005** ರಂದು ಗು.ನಂ.183/06 ಕಲಂ **498**(ಎ) **306** ಸಹಿತ **34** ಐಪಿಸಿ ರೀತ್ಯಾ

ದಾಖಲಾಗಿದ್ದು, ನೀವು ಮೃತಳಾದ ಶ್ರೀಮತಿ ಸಲ್ಮಾಬಾನು ಕೋಂ ಫಕ್ರುದ್ದೀನ್ ಸಾಬ್ ನೇಣು ಹಾಕಿಕೊಳ್ಳಲು ಉಪಯೋಗಿಸಿದ ಸೀರೆಯನ್ನು ಅಮಾನತ್ತು ಪಡಿಸಿಕೊಳ್ಳದೆ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಮತ್ತು ಲೋಪ ಎಸಗಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 21-10-2006ರ ಆದೇಶದಲ್ಲಿ ಅರ್ಜಿದಾರರರಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:05-03-2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಪ್ರಕರಣದ ತನಿಖೆಯಲ್ಲಿ ತೀರ್ವ ನಿರ್ಲಕ್ಷ್ಯತನ ತೋರಿರುವುದು ಸಾಬೀತಾಗಿರುತ್ತದೆ. ಅಲ್ಲದೆ ಈ ಕರ್ತವ್ಯ ಲೋಪಕ್ಕೆ ವಿಧಿಸಿರುವ ಶಿಕ್ಷೆಯು ಕಡಿಮೆ ಪ್ರಮಾಣದ್ದಾಗಿರುತ್ತದೆ. ಇದನ್ನು ಪುನರ್ ಪರಿಶೀಲಿಸಲು ಯಾವುದೇ ದಾಖಲೆಗಳು ಇರುವುದಿಲ್ಲ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 07 ಪೊಸಿಅ 2008, ಬೆಂಗಳೂರು, ದಿನಾಂಕ: 10ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ರಾಜು, ಪಿ.ಎಸ್.ಐ., ಶಿಕಾರಿಪುರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಹಾಲಿ ವರ್ತೂರು ಪೊಲೀಸ್ ಠಾಣೆ, ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 153

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಿ.ಎಂ.ಪುರಾಣಿಕಮಠ, ಎಚ್.ಸಿ.-03, 10ನೇ ಪಡೆ, ಕೆ.ಎಸ್.ಆರ್.ಪಿ., ಶಿಗ್ಗಾಂವ್ ಅವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ.,ಬೆಂಗಳೂರು. ಇವರ ಆದೇಶ ಸಂಖ್ಯೆ:ಅಪೀಲು/ 43/2005/06, ದಿನಾಂಕ:11-10-2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು. ಇವರ ಆದೇಶ ಸಂಖ್ಯೆ:ಅಪೀಲ(6)/ 52/2006-07, ದಿನಾಂಕ:06-06-2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:15-08-2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)126/2007-08. ದಿನಾಂಕ:13-12-2007.

* * *

**ಪ್ರಸ್ತಾವನೆ:**

ಶ್ರೀ ಸಿ.ಎಂ.ಪುರಾಣಿಕಮಠ, ಎಚ್.ಸಿ.-03, 10ನೇ ಪಡೆ, ಕೆ.ಎಸ್.ಆರ್.ಪಿ. ಶಿಗ್ಗಾಂವ್ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ಸಿ.ಎಂ.ಪುರಾಣಿಕಮಠ, ಎಚ್.ಸಿ.-03, 10ನೇ ಪಡೆ, ಕೆ.ಎಸ್.ಆರ್.ಪಿ., ಶಿಗ್ಗಾಂವ್ ಇವರು ಶ್ರೀಮತಿ ವಿದ್ಯಾಶ್ರೀ ಉರುಫ್ ಸುಜಾತಳನ್ನು ಗುರು ಹಿರಿಯರ ಸಮಕ್ಷಮದಲ್ಲಿ ಮದುವೆ ಮಾಡಿಕೊಂಡಿದ್ದು, ಇನ್ನೂ ಜೀವಂತವಿರುವಾಗಲೇ ದಿನಾಂಕ:05-05-1992 ರಂದು ಶ್ರೀಮತಿ ರೇಣುಕಾ ಕೋಳಿ ಅನ್ನುವ ಇನ್ನೊಬ್ಬಳೊಂದಿಗೆ ಮದುವೆ ಮಾಡಿಕೊಂಡಿದ್ದು, ಈ ಬಗ್ಗೆ ಸಬ್ ರಿಜಿಸ್ಟ್ರಾರ್ ಆಫೀಸಿನಲ್ಲಿ ದಿನಾಂಕ:11-04-2005 ರಂದು ನೊಂದಾಯಿಸಿದ ಬಗ್ಗೆ ಪ್ರಮಾಣ ಪತ್ರ ಪಡೆದುಕೊಂಡಿದ್ದು, ಮತ್ತು ಎರಡನೇ ಮದುವೆ

ಮಾಡಿಕೊಳ್ಳಲು ಸೇವೆ ಸಲ್ಲಿಸುತ್ತಿರುವ ಪಡೆಯ ಮುಖ್ಯಸ್ಥರಿಂದ ಕೆ.ಸಿ.ಎಸ್. (ವರ್ತನೆ) ನಿಯಮಗಳು 1966 ರನ್ವಯ ಅನುಮತಿಯನ್ನು ಪಡೆದುಕೊಳ್ಳದೆ ಕರ್ತವ್ಯದಲ್ಲಿ ಬೇಜವಾಬ್ದಾರಿ, ನಿರ್ಲಕ್ಷ್ಯತನ ಪ್ರದರ್ಶಿಸಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ.,ಬೆಂಗಳೂರು. ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:11-10-2006ರ ಆದೇಶದಲ್ಲಿ ಅರ್ಜಿದಾರರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು. ಇವರು ಮೇಲ್ಮನವಿಯನ್ನು ಪುರಷ್ಕರಿಸಿ ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:06-06-2007ರ ಆದೇಶದಲ್ಲಿ ಸದರಿಯವರನ್ನು ಕರ್ತವ್ಯಕ್ಕೆ ಪುನರ ನೇಮಕ ಮಾಡಿ, 10ನೇ ಪಡೆ, ಕೆ.ಎಸ್.ಆರ್.ಪಿ. ಶಿಗ್ಗಾಂವಿಯಲ್ಲಿ ಖಾಲಿ ಇರುವ ಎಚ್.ಸಿ. ಹುದ್ದೆಗೆ ನಿಯುಕ್ತಿಗೊಳಿಸಿ, ಸದರಿಯವರ ವೇತನವನ್ನು ಎಚ್.ಸಿ. ಹುದ್ದೆಯ ಕನಿಷ್ಟ ಹಂತಕ್ಕೆ ಮೂರು ವರ್ಷಗಳ ಕಾಲ ಇಳಿಸಿ, ಈ ಶಿಕ್ಷೆಯ ಅವಧಿ ಮುಗಿದ ಅನಂತರ ಹೊಸದಾಗಿ ವೇತನ ಬಡ್ತಿ ಗಳನ್ನು ಗಳಿಸುವಂತೆ ಮತ್ತು ಕರ್ತವ್ಯದಿಂದ ಹೊರಗುಳಿದ ಅವಧಿಯನ್ನು ಕರ್ತವ್ಯದ ಹೊರಗುಳಿದ ಅವಧಿ ಎಂದೇ ಪರಿಗಣಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿಯವರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿದ ಶಿಕ್ಷೆಯನ್ನು ಮಾರ್ಪಡಿಸಿ, ಮೇಲ್ಮನವಿ ಪ್ರಾಧಿಕಾರವು ಕಡಿಮೆ ಪ್ರಮಾಣದ ಶಿಕ್ಷೆ ವಿಧಿಸಿದ್ದು, ಇದನ್ನು ಪುನ ಮಾರ್ಪಡಿಸಲು ಸಕಾರಣಗಳು ಇರುವುದಿಲ್ಲ. ಆದ್ದರಿಂದ, ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 390 ಪೊಸಿಅ 2007 ಬೆಂಗಳೂರು, ದಿನಾಂಕ: 5ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಎಂ.ಪುರಾಣಿಕಮಠ, ಎಚ್.ಸಿ.-03, 10ನೇ ಪಡೆ, ಕೆ.ಎಸ್.ಆರ್.ಪಿ., ಶಿಗ್ಗಾಂವ್ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 111

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಚ್.ಎಂ.ಓಂಕಾರಯ್ಯ, ಡಿ.ಎಸ್.ಪಿ., (ಇ.ವಿ) ಕೇಂದ್ರ ವಲಯ, ಬೆಂಗಳೂರು, ಅವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬಿ(8)43/2006-07, ದಿನಾಂಕ:27-10-2007

2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:02-11-2007

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ(8)43/2006-07, ದಿನಾಂಕ:2-11-2007

* * *

**ಪ್ರಸ್ತಾವನೆ:**

ಶ್ರೀ ಎಚ್.ಎಂ.ಓಂಕಾರಯ್ಯ, ಡಿ.ಎಸ್.ಪಿ., (ಇ.ವಿ) ಕೇಂದ್ರ ವಲಯ, ಬೆಂಗಳೂರು, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

ಶ್ರೀ ಎಚ್.ಎಂ.ಓಂಕಾರಯ್ಯ, ಡಿ.ಎಸ್.ಪಿ., (ಇ.ವಿ) ಕೇಂದ್ರ ವಲಯ, ಬೆಂಗಳೂರು, ಆದ ನೀವು ಹಿಂದೆ ಪ್ರಭಾರ ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಚಿಕ್ಕಬಳ್ಳಾಪುರ ವೃತ್ತದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿಬ್ಬೂರಹಳ್ಳಿ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ:390/2003ರ ಪ್ರಕರಣದಲ್ಲಿ ಆರೋಪಿಯಾದ ಈಶ್ವರಪ್ಪ ಎಂಬುವವರು ಶ್ರೀ ಮುನಿಯಪ್ಪ ಎಂಬುವವರನ್ನು ಕೊಲೆ ಮಾಡಿದ್ದು, ಸದರಿ ಪ್ರಕರಣದ ತನಿಖೆಯನ್ನು ದಿನಾಂಕ:09-08-1996 ರಂದು ವಹಿಸಿಕೊಂಡು ದಿನಾಂಕ:21-11-1996 ರವರಗೆ ಸುಮಾರು ಮೂರುವರೆ ತಿಂಗಳ ಕಾಲ ಯಾವುದೇ ಸಾಕ್ಷಿಗಳನ್ನು ವಿಚಾರಣೆ ಮಾಡಿರುವುದಿಲ್ಲ. ಹಾಗೂ ಸದರಿ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡಂತಹ ಮಾಲುಗಳನ್ನು ನ್ಯಾಯ ವಿಜ್ಞಾನ ಪ್ರಯೋಗಾಲಯಕ್ಕೆ ಪರಿಕ್ಷೆಗಾಗಿ ಕಳುಹಿಸಿಕೊಟ್ಟು, ವಸ್ತು ಸಾಕ್ಷ್ಯಾಧಾರಗಳನ್ನು

ಸಂಗ್ರಹಿಸಿ ಸಕಾಲಕ್ಕೆ ನ್ಯಾಯಾಲಯಕ್ಕೆ ನಿವೇದಿಸಿಕೊಂಡಿರುವುದಿಲ್ಲ. ಇದರಿಂದಾಗಿ ಸಾಕ್ಷ್ಯಾಧಾರಗಳಿಲ್ಲದೆ ಆರೋಪಿಯ ಆರೋಪವು ಸಾಬೀತಾಗದೆ ಇದ್ದದುರಿಂದ ನ್ಯಾಯಾಲಯವು ಆರೋಪಿಯನ್ನು ಖುಲಾಸೆಗೊಳಿಸಲು ಕಾರಣರಾಗುವ ಮೂಲಕ ನೀವು ನಿಮ್ಮ ಕರ್ತವ್ಯದಲ್ಲಿ ಅಧಿಕಾರ ದುರುಪಯೋಗ, ಬೇಜವಾಬ್ದಾರಿತನ ಮತ್ತು ಕರ್ತವ್ಯ ಲೋಪ ಎಸಗಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:27-10-2007ರ ಆದೇಶದಲ್ಲಿ ಅರ್ಜಿದಾರರರಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷದ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 363 ಪೊಸಿಅ 2007 ಬೆಂಗಳೂರು, ದಿನಾಂಕ: 2ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಚ್.ಎಂ.ಓಂಕಾರಯ್ಯ, ಡಿ.ಎಸ್.ಪಿ., (ಇ.ವಿ) ಕೇಂದ್ರ ವಲಯ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 112

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಶಂಕರಲಿಂಗ, ಎ.ಪಿ.ಸಿ.-242, ಡಿ.ಎ.ಆರ್., ಬೀದರ್ ಅವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್, ಇವರ ಆದೇಶ ಸಂಖ್ಯೆ:03:ಡಿಇ:2005, ದಿನಾಂಕ:21-03-2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು/ 69/ಈವ/2006, ದಿನಾಂಕ:22-07-2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:16-07-2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)64/2007-08 , ದಿನಾಂಕ:11-12-2007.

**ಪ್ರಸ್ತಾವನೆ:**

ಶ್ರೀ ಶಂಕರಲಿಂಗ, ಎ.ಪಿ.ಸಿ.-242, ಡಿ.ಎ.ಆರ್., ಬೀದರ್ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ದಿನಾಂಕ:01-11-2004 ರಂದು 3 ಜನ ವಿಚಾರಣಾ ಬಂಧಿಗಳಾದ (1) ಬಾಪುರಾವ್ (2) ಶಾಂತಕುಮಾರ್ ತಂದೆ ವಿಶ್ವನಾಥ (3) ಕಲ್ಯಾಣ್‌ರಾವ್ ಇವರನ್ನು ಜಿಲ್ಲಾ ಕಾರಾಗೃಹ ಬೀದರ್‌ನಲ್ಲಿ ಸೂಕ್ತ ಬೆಂಗಾವಲಿನಲ್ಲಿ ಎ.ಎಚ್.ಸಿ.-38, ವೈ.ಮಂಜುನಾಥ್ ಹಾಗೂ ಎ.ಪಿ.ಸಿ.-242, ಶಂಕರಲಿಂಗ ಬೀದ್ ಜಿಲ್ಲಾ ಕಾರಾಗೃಹ ಕರ್ತವ್ಯ ನಿಯೋಜನೆ ಅವರನ್ನು ಜೈಲಿ ಅಂಬ್ಯುಲೆನ್ಸ್‌ನಲ್ಲಿ ಕಳುಹಿಸಿದ್ದು, ಸುಮಾರು 1200 ಗಂಟೆಗೆ ವಿಚಾರಣಾ ಬಂಧಿ ಶಾಂತಕುಮಾರ ತಂದೆ ವಿಶ್ವನಾಥ ಎಂಬುವವನು ಉಪಚಾರ ಪಡೆದು, ಮರಳಿ ಕರೆದುಕೊಂಡು ಬರುವಾಗ ಆಸ್ಪತ್ರೆಯಲ್ಲಿ ತನಗೆ ವಾಂತಿ ಬರುತ್ತಿದೆ. ತನಗೆ ನೀರು ಬೇಕು ಎಂದು ಹೇಳಿದಾಗ ಬೆಂಗಾವಲು ಎಚ್.ಸಿ.-38, ವೈಜನಾಥ ಹಾಗೂ ಎ.ಪಿ.ಸಿ.-242, ಶಂಕರಲಿಂಗ ಇವರು ನೀರು ತರುವಾಗ ವಿಚಾರಣಾ ಬಂಧಿ ಶಾಂತಕುಮಾರ ಆಸ್ಪತ್ರೆ ಕಾಂಪೌಂಡ್ ಜಿಗಿದು, ಪಾರಾಗಿ ಓಡಿ ಹೋಗಿದ್ದು, ಆ.ಪೋ.ಅ. ತಮ್ಮ ಕರ್ತವ್ಯ ನಿರ್ವಹಿಸುವಾಗ ಅತೀವ ನಿರ್ಲಕ್ಷ್ಯತನ ಹಾಗೂ ಖಂಡನಿಯ ದುರ್ನಡತೆ ಎಸಗಿರುವರು.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು,

ಬೀದರ್, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:21-03-2006ರ ಆದೇಶದಲ್ಲಿ ಅರ್ಜಿದಾರರರಿಗೆ ಮುಂಬರುವ ಒಂದು ವಾರ್ಷಿಕ ವೇತನ ಮುಂಬಡ್ತಿಯು ಭವಿಷ್ಯದ ವೇತನ ಮಂಬಡ್ತಿಗಳಿಗೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಿದ ಹಾಗೂ ಅಮಾನತ್ತಿನಲ್ಲಿದ್ದ ಅವಧಿ ದಿನಾಂಕ:08-11-2004 ರಿಂದ 13-01-2005ರ ವರಗೆ ಅಮಾನತ್ತೆಂದೇ ಪರಿಗಣಿಸಿ ಈಗಾಗಲೇ ಕೊಡಮಾಡಿದ ಜೀವನಾಧಾರ ಭತ್ಯಕ್ಕೆ ಸೀಮಿತಗೊಳಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:22-07-2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ವಿಚಾರಣಾಧೀನ ಖೈದಿಯು ತಪ್ಪಿಸಿಕೊಳ್ಳಲು ಕಾರಣರಾಗಿ, ಕರ್ತವ್ಯದಲ್ಲಿ ತೀರ್ವ ನಿರ್ಲಕ್ಷ್ಯತನ ತೋರಿದ ಗಂಭೀರ ಆರೋಪಕ್ಕೆ ಶಿಸ್ತು ಪ್ರಾಧಿಕಾರವು ವಿಧಿಸಿದ ಶಿಕ್ಷೆಯು ಸಮರ್ಪಕವಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 389 ಪೊಸಿಅ 2007 ಬೆಂಗಳೂರು, ದಿನಾಂಕ: 5ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಂಕರಲಿಂಗ, ಎ.ಪಿ.ಸಿ.-242, ಡಿ.ಎ.ಆರ್., ಬೀದರ್ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 105

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಜಿ.ಆರ್.ಲಕ್ಷ್ಮಣ್, ಎ.ಎಸ್.ಐ., (ನಿವೃತ್ತ) ಕೊಪ್ಪಳ ಜಿಲ್ಲೆ ಅವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಪ್ಪಳ. ಇವರ ಆದೇಶ ಸಂಖ್ಯೆ:ಇವಿ/12/2005, ದಿನಾಂಕ:11-10-2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ. ಇವರ ಆದೇಶ ಸಂಖ್ಯೆ:ಅಪೀಲು/133/ ಈವ/2006, ದಿನಾಂಕ:31-01-2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:13-08-2007
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)65/2007-08, ದಿನಾಂಕ:11-12-2007.

**ಪ್ರಸ್ತಾವನೆ:**

ಶ್ರೀ ಜಿ.ಆರ್.ಲಕ್ಷ್ಮಣ್, ಎ.ಎಸ್.ಐ., (ನಿವೃತ್ತ) ಕೊಪ್ಪಳ ಜಿಲ್ಲೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ಹಾಗೂ ಉಪ ನಿಯಮ 2 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ದಿನಾಂಕ:17-09-2005 ರಂದು ಪಿಎಸ್ಐ ಕಾರಟಗಿ ಠಾಣೆರವರು ಗುಲಬರ್ಗಾ ಹೈಕೋರ್ಟ್ ಸಂಚಾರಿ ಪೀಠದ ಬಂದೋಬಸ್ತ ಕರ್ತವ್ಯಕ್ಕೆ ಹೋದಾಗ ನೀವು ಅದೇ ದಿನ ಕಾರಟಗಿ ಠಾಣೆಯ ಪಿಎಸ್ಐ ಅವರ ಡ್ರಾದಲ್ಲಿದ್ದ ಹಳೆಯ ಪೊಲೀಸ್ ಠಾಣೆಯ ಬೀಗದ ಕೈಗಳನ್ನು ಪಿಎಸ್ಐ ಕಾರಟಗಿ ಅವರ ಅಥವಾ ಮೇಲಧಿಕಾರಿಗಳ ಅನುಮತಿಯನ್ನು ಪಡೆಯದೇ ಅವುಗಳನ್ನು ತೆಗೆದುಕೊಂಡು ಪೊಲೀಸ್ ಠಾಣೆಯಲ್ಲಿ ಕೆಲಸ ಮಾಡುವ ಅರೆಕಾಲಿಕ ಜಾಡಮಾಲಿಯಾದ ಯಮನೂರಪ್ಪ ತಂದೆ ಶರಣಪ್ಪ ಮಡಿವಾಳರ ಇವರನ್ನು ಕರೆದು ಅವರ ಕೈಯಲ್ಲಿ ಕೊಟ್ಟು ಅದರಲ್ಲಿದ್ದ 11 ನಿರುಪಯುಕ್ತ ಹಳೆಯ ಸೈಕಲ್ಲುಗಳನ್ನು ತೆಗೆದುಕೊಂಡು ಹೋಗಿ, ಕಾರಟಗಿ ಜಿ.ಪಿ.ನಗರದಲ್ಲಿರುವ ಮೆಹಬೂಬ ಎಂಬುವವರ ಗುಜರಿ ಅಂಗಡಿಗೆ ರೂ.1800-00 ಗಳಿಗೆ ಮಾರಾಟ ಮಾಡಿದ್ದು ಇರುತ್ತದೆ. ಪಿಎಸ್ಐ ಅವರ ಅಥವಾ ಮೇಲಧಿಕಾರಿಗಳ ಅನುಮತಿಯನ್ನು ಪಡೆಯದೇ ಸರಕಾರಿ ಸ್ವತ್ತನ್ನು ಮಾರಾಟ ಮಾಡಿ, ಯಾವುದೇ ಅಧಿಕಾರವಿಲ್ಲದೇ ಠಾಣೆಗೆ ಸಂಬಂಧಪಟ್ಟ ಸ್ವತ್ತುಗಳನ್ನು ತಮ್ಮ ಮನಸಾ ಇಚ್ಛೆಯಿಂದ ಮಾರಾಟ ಮಾಡಿ ಕರ್ತವ್ಯದಲ್ಲಿ ಅತೀವ

ನಿರ್ಲಕ್ಷ್ಯತನ, ಬೇಜವಾಬ್ದಾರಿತನ ಹಾಗೂ ಅಧಿಕಾರ ದುರುಪಯೋಗ ಪಡಿಸಿಕೊಂಡು, ಕರ್ತವ್ಯದಲ್ಲಿ ನಿಷ್ಕಾಳಜಿತನ ಮತ್ತು ಕರ್ತವ್ಯ ವಿಮುಖತೆ ಅಶಿಸ್ತನ್ನು ಪ್ರದರ್ಶಿಸಿದ್ದು ಇರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಪ್ಪಳ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:**11-10-2006**ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ,ಗುಲಬರ್ಗಾ. ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:**31-01-2007**ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ ಯಮನೂರ್ ಮತ್ತು ಶ್ರೀ ವೇಂಕಟೇಶ್ ಇಬ್ಬರೂ ವಿಚಾರಣಾ ಸಮಯದಲ್ಲಿ ಆಪಾದಿತರ ಪರವಾಗಿ ಸಾಕ್ಷಿ ನುಡಿದಿರುವುದು ನಿಜವಿರುತ್ತದೆ. ಆದರೆ, ಈ ಇಬ್ಬರೂ ಆಪಾದಿತರಿಂದ ಲಾಭ ಪಡೆದಿರುವುದರಿಂದ ಅವರ ಪರವಾಗಿ ಸಾಕ್ಷಿ ಹೇಳಿರುತ್ತಾರೆಂದು ಶಿಸ್ತು ಪ್ರಾಧಿಕಾರವು ಅಭಿಪ್ರಾಯ ಪಟ್ಟಿರುತ್ತದೆ. ಉಳಿದ ಸಾಕ್ಷಿಗಳಾದ ಶೇಖರಗೌಡ, ಅಮರಣ್ಣ, ವಿರೂಪಯ್ಯ, ಮಠದ್, ಅಶ್ರಫ್ ಆಲಿ, ಶ್ರೀ ಅರುಣ್ ಗೋಡುಗೋಲೆ ಡಿ.ಎಸ್.ಪಿ. ಮತ್ತು ಎಂ.ಬಿ.ಪಾಟೀಲ್ ಸಿ.ಪಿ.ಐ. ಅವರು ಆರೋಪಿತ ಪೊಲೀಸ್ ಅಧಿಕಾರಿಯೇ ಈ ಕೃತ್ಯಕ್ಕೆ ಕಾರಣವೆಂದು ಸಾಕ್ಷಿ ನುಡಿದಿರುವುದರಿಂದ ಅರ್ಜಿದಾರರ ವಾದವನ್ನು ಒಪ್ಪಲಾಗುವುದಿಲ್ಲ. ಶಿಸ್ತು ಪ್ರಾಧಿಕಾರದ ಪೊಲೀಸ್ ಅಧೀಕ್ಷಕರು ಎಲ್ಲ ಅಂಶಗಳನ್ನು ಪರಿಗಣಿಸಿ ಸದರಿಯವರ ಸೇವೆ ಹಾಗೂ ಅವರನ್ನು ಅವಲಂಬಿಸಿರುವ ಕುಟುಂಬವನ್ನು ಗಣನೆಗೆ ತೆಗೆದುಕೊಂಡು ಅವರನ್ನು ಸೇವೆಯಿಂದ ವಜಾ ಮಾಡುವ ಪ್ರಸ್ತಾವನೆಯನ್ನು ಕಡಿಮೆಗೊಳಿಸಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿರುತ್ತಾರೆ. ಮೇಲ್ಮನವಿ ಪ್ರಾಧಿಕಾರವು ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ ಇವರ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ. ಅರ್ಜಿದಾರರ ವಿರುದ್ಧದ ಆಪಾದನೆಗಳು ಗಂಭೀರ ಸ್ವರೂಪದಾಗಿದ್ದು, ಶಿಕ್ಷೆಯನ್ನು ರದ್ದುಗೊಳಿಸಲು ದಾಖಲೆಗಳು ಇರುವುದಿಲ್ಲ. ಅಲ್ಲದೆ, ಇವರ ವಿರುದ್ಧ ಈ ಹಿಂದೆ **10** ಪ್ರಕರಣಗಳಲ್ಲಿ ಅಮಾನತ್ತು ಮತ್ತು ವೇತನ ಬಡ್ತಿ ಮುಂದೂಡಿಕೆ ಮುಂತಾದ ಶಿಕ್ಷೆ ವಿಧಿಸಲಾಗಿದೆ. ಅಲ್ಲದೆ, ಇನ್ನೂ **1** ಪ್ರಕರಣದಲ್ಲಿ ಇಲಾಖಾ ವಿಚಾರಣೆ ಆದೇಶಿಸಿದ್ದು, ಇವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿರುವುದರಿಂದ ಅದನ್ನು ಸದ್ಯಕ್ಕೆ ಸ್ಥಗಿತಗೊಳಿಸಲಾಗಿದೆ. ಮೇಲೆ ವಿವರಿಸಿದ ಹಿನ್ನಲೆಯಲ್ಲಿ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 378 ಪೊಸಿಅ 2007 ಬೆಂಗಳೂರು, ದಿನಾಂಕ: 5ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ಆರ್.ಲಕ್ಷ್ಮಣ್, ಎ.ಎಸ್.ಐ., (ನಿವೃತ್ತ) ಕೊಪ್ಪಳ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 106

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಎ.ವೀರಣ್ಣಗೌಡರ್, ಪಿ.ಐ., ಕಸಬಾ ಪೊಲೀಸ್ ಠಾಣೆ, ಹುಬ್ಬಳ್ಳಿ ಅವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರೈಲ್ವೇಸ್, ಬೆಂಗಳೂರು. ಇವರ ಆದೇಶ ಸಂಖ್ಯೆ:ಡಿ.ಇ/**17/2000**, ದಿನಾಂಕ:**23-03-2005**

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ, ಬೆಂಗಳೂರು. ಇವರ ಆದೇಶ ಸಂಖ್ಯೆ:ಸಿಬಿ**(8)20/2005-06**, ದಿನಾಂಕ:**28-05-2005**

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:**28-04-2005**

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ**(8)20/2005-06**, ದಿನಾಂಕ:26-11-2007

**ಪ್ರಸ್ತಾವನೆ:**

ಶ್ರೀ ಎಸ್.ಎ.ವೀರಣ್ಣಗೌಡರ್, ಪಿ.ಐ., ಕಸಬಾ ಪೊಲೀಸ್ ಠಾಣೆ, ಹುಬ್ಬಳ್ಳಿ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ಉಪ ನಿಯಮ 2 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಮುನಿರಾಬಾದ್ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ:34/98, 167/99, 340/98, 54/99, 76/99, 137/98, 70/99, 82/98, 86/99, 78/98, ಈ ಎಲ್ಲಾ ಪ್ರಕರಣಗಳು ಐ.ಪಿ.ಸಿ. ಕಲಂ 279, 304(ಎ), 338, ರ ಪ್ರಕಾರ ವರದಿಯಾಗಿದ್ದು, ಪರಿಷ್ಕರಣಾ ಮೇಲ್ಮನವಿದಾರರು ಸದರಿ ಪ್ರಕರಣಗಳಲ್ಲಿ ದಾಖಲೆಗಳನ್ನು ತಿದ್ದುಪಡಿ ಮಾಡಿ, ಕರ್ತವ್ಯ ನಿರ್ಲಕ್ಷ್ಯತನ, ಕರ್ತವ್ಯದಲ್ಲಿ ಲೋಪದೋಷ, ಸುಳ್ಳು ಹೇಳಿಕೆಗಳನ್ನು ಸೃಷ್ಟಿಸುವ ಬಗ್ಗೆ, ಬ್ಯಾಂಕಿಗೆ ಹಣ ಜಮಾ ಮಾಡದಿರುವ ಬಗ್ಗೆ, ಹೀಗೆ ನಾನಾ ಕಾರಣಗಳಲ್ಲಿ ಮಾಡಿರುವ ತಪ್ಪಿನಿಂದ ಕರ್ತವ್ಯ ನಿರ್ಲಕ್ಷ್ಯತನ ಎಸಗಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರೈಲ್ವೇಸ್, ಬೆಂಗಳೂರು. ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:23-03-2005ರ ಆದೇಶದಲ್ಲಿ ಅರ್ಜಿದಾರರರಿಗೆ ಪಿ.ಐ. ಹುದ್ದೆಯಿಂದ ಪಿ.ಎಸ್.ಐ ಹುದ್ದೆಯ ಮಟ್ಟಕ್ಕೆ 2 (ಎರಡು) ವರ್ಷಗಳ ಕಾಲ ಹಿಂಬಡ್ತಿಗೊಳಿಸಿದ ಹಾಗೂ ಈ ಅವಧಿಯು ಕರ್ತವ್ಯದ ಮೇಲೆ ಕಳೆಯುವ ಷರತ್ತಿಗೆ ಒಳಪಡುವ ಮತ್ತು ಗುನ್ನೆ ಸಂ:82/98 ರಲ್ಲಿ ದುರುಪಯೋಗ ಪಡಿಸಿಕೊಂಡಿರುವ ರೂ 100/- ಗಳನ್ನು ವೇತನದಿಂದ ಕಡಿತಗೊಳಿಸಿ ಸರ್ಕಾರಕ್ಕೆ ಜಮಾ ಮಾಡಬೇಕಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ರಾಜ್ಯ, ಬೆಂಗಳೂರು, ಇವರು ಮೇಲ್ಮನವಿಯನ್ನು ಪರಿಶೀಲಿಸಿ ಅರ್ಜಿದಾರರ ಮೇಲ್ಮನವಿಯನ್ನು ಪುರಸ್ಕರಿಸಿ ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:28-05-2005ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರ ವಿಧಿಸಿರುವ ಶಿಕ್ಷೆಯನ್ನು ಮಾರ್ಪಡಿಸಿ, ಸದರಿಯವರ ಮುಂದಿನ ಎರಡು ವಾರ್ಷಿಕ ವೇತನ ಮುಂಬಡ್ತಿಗಳನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಮುಂದೂಡಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಲ್ಮನವಿ ಪ್ರಾಧಿಕಾರವು ಅರ್ಜಿದಾರರ ಮನವಿಯನ್ನು ಪರಿಗಣಿಸಿ, ಆರೋಪಗಳು ಸಾಬೀತಾಗಿದ್ದರೂ ಸಹ ಅರ್ಜಿದಾರರು 11 ವರ್ಷಗಳ ಕಾಲ ಪಿ.ಐ. ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಿದ್ದನ್ನು ಪರಿಗಣಿಸಿ ಅವರನ್ನು ಪಿ.ಎಸ್.ಐ. ಹುದ್ದೆಗೆ ಹಿಂಬಡ್ತಿ ನೀಡಿರುವುದನ್ನು ಮಾರ್ಪಡಿಸಿ ಈಗಾಗಲೇ ಕಡಿಮೆ ಶಿಕ್ಷೆಯನ್ನು ವಿಧಿಸಿರುತ್ತಾರೆ. ಅಲ್ಲದೇ ಅರ್ಜಿದಾರರು ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿರುವುದಿಲ್ಲ. ಕೇವಲ ತಾಂತ್ರಿಕ ಕಾರಣಗಳ ಆಧಾರದ ಮೇಲೆ ತಮಗೆ ವಿಧಿಸಿರುವ ಶಿಕ್ಷೆಯನ್ನು ರದ್ದುಪಡಿಸಲು ಕೋರಿರುತ್ತಾರೆ. ಆದ್ದರಿಂದ, ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ಮಾರ್ಪಾಡಿನ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 317ಪೊಸಿಅ 2007 ಬೆಂಗಳೂರು, ದಿನಾಂಕ: 3ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎ.ವೀರಣ್ಣಗೌಡರ್, ಪಿ.ಐ., ಕಸಬಾ ಪೊಲೀಸ್ ಠಾಣೆ, ಹುಬ್ಬಳ್ಳಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 107

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಆರ್.ಮೋಹನ್ ಸಿಂಗ್, ಜೂನಿಯರ್ ಕಂಪೋಸಿಟರ್, ಪೊಲೀಸ್ ಮುದ್ರಣಾಲಯ, ಪ್ರಧಾನ ಕಛೇರಿ, ಬೆಂಗಳೂರು ನಗರ ಅವರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**1) ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್ (ಕೇಂದ್ರ ಸ್ಥಾನ-1), ಪ್ರಧಾನ ಕಛೇರಿ, ಬೆಂಗಳೂರು, ಇವರ ಆದೇಶ ಸಂಖ್ಯೆ:ಪ್ರಕಸಿ(2)160/99-2000 ದಿನಾಂಕ:25-02-2004

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು(6)7/2004, ದಿನಾಂಕ:08-09-2004

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:20-06-2007

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2) 49/2007-08 ದಿನಾಂಕ:12-11-2007

**ಪ್ರಸ್ತಾವನೆ:**

ಶ್ರೀ ಆರ್.ಮೋಹನ್ ಸಿಂಗ್, ಜೂನಿಯರ್ ಕಂಪೋಸಿಟರ್, ಪೊಲೀಸ್ ಮುದ್ರಣಾಲಯ, ಪ್ರಧಾನ ಕಛೇರಿ, ಬೆಂಗಳೂರು ನಗರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವೆ ನಿಯಮಾವಳಿ (ನಿಯಂತ್ರಣ, ವರ್ಗೀಕರಣ, ಮತ್ತು ಮೇಲ್ಮನವಿ) ನಿಯಮ 1957 ನಿಯಮದ ಪ್ರಕಾರ ತಿಳುವಳಿಕೆ ಪತ್ರ ನೀಡಲಾಗಿದೆ.

**ದೋಷರೋಪಣೆ:**

ಶ್ರೀ ಆರ್.ಮೋಹನ್ ಸಿಂಗ್, ಜೂನಿಯರ್ ಕಂಪೋಸಿಟರ್, ಪೊಲೀಸ್ ಮುದ್ರಣಾಲಯ, ಪ್ರಧಾನ ಕಛೇರಿ, ಬೆಂಗಳೂರು ನಗರ ಆದ ನೀವು ದಿನಾಂಕ:31–10–1999 ರಂದು ಹೆಚ್.ಸಿ.1051, ಶ್ರೀ ಎಂ.ಸತ್ಯನಾರಾಯಣ, ಸಿಟಿ (ಎಸ್.ಬಿ) ಇಮ್ಮಿಗ್ರೇಷನ್ ವಿಭಾಗ, ಪೊಲೀಸ್ ಕಮೀಷನರ್ ಕಛೇರಿ, ಬೆಂಗಳೂರು ರವರೊಡನೆಗೂಡಿ ಪೊಲೀಸ್ ಇನ್ಸ್‌ಪೆಕ್ಟರ್, ಸಿಟಿ ಸ್ಪೆಷಲ್ ಬ್ರಾಂಚ್, ಬೆಂಗಳೂರು ರವರ ಹೆಸರಿನಲ್ಲಿ ಪತ್ರ ಸಂಖ್ಯೆ:ಸಿಪಿ/110/98 ರಲ್ಲಿ ದಿನಾಂಕ: 30–10–1999 ನ್ನು ಸೃಷ್ಟಿಸಿ ಏರ್‌ಪೋರ್ಟ್ ವಿಭಾಗದ ಇಮಿಗ್ರೇಷನ್ ಅರ್ರೈವಲ್ ಸೀಲ್–22ರ ನಕಲು ಸೀಲನ್ನು ಮಾಡಲು ಪ್ರಯತ್ನಿಸಿರುತ್ತೀರಿ. ಈ ಬಗ್ಗೆ ಉಪ್ಪಾರಪೇಟೆ ಪೊಲೀಸ್ ಠಾಣೆಯಲ್ಲಿ ಅಪರಾಧ ಮೊಕದ್ದಮೆ ಸಂಖ್ಯೆ: 779/99 ಕಲಂ 417,471,472 ಜೊತೆಗೆ 511 ಐಪಿಸಿಯಲ್ಲಿ ಆರೋಪಿತರಾಗಿ ದುರ್ನಡತೆಯನ್ನು ಪ್ರದರ್ಶಿಸಿ ಕೆ.ಸಿ.ಎಸ್. ನಡತೆ 1966 ನಿಯಮ 12 ಮತ್ತು 24 ನ್ನು ಉಲ್ಲಂಘಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಇನ್ಸ್‌ಪೆಕ್ಟರ್ ಜನರಲ್ (ಕೇಂದ್ರ ಸ್ಥಾನ-1), ಪ್ರಧಾನ ಕಛೇರಿ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:25-02-2004ರ ಆದೇಶದಲ್ಲಿ ಅರ್ಜಿದಾರರರಿಗೆ ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಹಾಗೂ ಅಮಾನತ್ತಿ ಅವಧಿ ದಿನಾಂಕ:05-11-1999 ರಿಂದ 06-12-1999ರ ವರಗಿನ ದಿನಗಳನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯನ್ನು ಪುರಸ್ಕರಿಸಿ, ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:08-09-2004ರ ಆದೇಶದಲ್ಲಿ ಸದರಿಯವರನ್ನು ಸೇವೆಗೆ ಪುನರ್ ನೇಮಕ ಮಾಡಿ ಇವರ ವೇತನವನ್ನು ಇವರು ಪಡೆಯುತ್ತಿರುವ ವೇತನ ಶ್ರೇಣಿಯ ಕನಿಷ್ಟ ಮಟ್ಟಕ್ಕೆ ಮೂರು ವರ್ಷಗಳ ಕಾಲ ಇಳಿಸಿ, ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಮುಂದೂಡಲಾಗಿದೆ. ಮೂರು ವರ್ಷದ ಅನಂತರ ಇವರು ಹಿಂದೆ ಯಾವ ಮೂಲ ವೇತನದಲ್ಲಿ ವಾರ್ಷಿಕ ವೇತನವನ್ನು ಪಡೆಯುತ್ತಿದ್ದರೋ ಅಲ್ಲಿಂದ ಮುಂದುವರೆಯುವಂತೆ ಹಾಗೂ ಇವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಮತ್ತು ಸೇವೆಯಿಂದ ಹೊರಗುಳಿದ ಅವಧಿಯನ್ನು ಹೊರಗುಳಿದ ಅವಧಿಯೆಂದೇ ಪರಿಗಣಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧ ಹೊರಿಸಲಾದ ಆರೋಪಗಳು ಗಂಭೀರ ಸ್ವರೂಪದ್ದಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆಯು ಸೂಕ್ತವಾಗಿ ರುತ್ತದೆ. ಆದರೆ ಶಿಸ್ತು ಪ್ರಾಧಿಕಾರಿಯು ವಿಧಿಸಿದ ಶಿಕ್ಷೆಯನ್ನು ಮಾರ್ಪಡಿಸಿ ಮೇಲ್ಮನವಿ ಪ್ರಾಧಿಕಾರವು ಕಡಿಮೆ ಮಾಡಿರುತ್ತಾರೆ. ಆದ್ದರಿಂದ, ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 366 ಪೊಸಿಅ 2007 ಬೆಂಗಳೂರು, ದಿನಾಂಕ: 3ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ಮೋಹನ್ ಸಿಂಗ್, ಜೂನಿಯರ್ ಕಂಪೋಸಿಟರ್, ಪೊಲೀಸ್ ಮುದ್ರಣಾಲಯ, ಪ್ರಧಾನ ಕಛೇರಿ, ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 108

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಚೂಡೇಗೌಡ, ಪಿಸಿ-3733, ವಿಧಾನ ಸೌಧ ಭದ್ರತೆ, ವಿಧಾನ ಸೌಧ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ, ಬೆಂಗಳೂರು ದಿನಾಂಕ: 13-12-2005

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:ಅಪೀಲು/32/2005 ದಿನಾಂಕ:08-09-2006

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:27-07-2006

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)29/2007-08 ದಿನಾಂಕ:20-02-2008

**ಪ್ರಸ್ತಾವನೆ:**

ಶ್ರೀ.ಚೂಡೇಗೌಡ, ಪಿಸಿ-3733, ವಿಧಾನ ಸೌಧ ಭದ್ರತೆ, ವಿಧಾನ ಸೌಧ, ಬೆಂಗಳೂರು ನಗರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:-**

ಶ್ರೀ.ಚೂಡೇಗೌಡ, ಪಿಸಿ-3733, ವಿಧಾನ ಸೌಧ ಭದ್ರತೆ, ವಿಧಾನ ಸೌಧ, ಬೆಂಗಳೂರು ನಗರ, ರವರು ದಿ:05-05-05 ರಂದು ವಿಧಾನಸೌಧ ದಕ್ಷಿಣ ದ್ವಾರದ ಕಡೆ ಇರುವ ಚೌಕಿ ಬಳಿ ಕರ್ತವ್ಯಕ್ಕೆ ಶ್ರೀ.ರವಿಕುಮಾರ್ ಪಿಸಿ-4777 ರವರೊಂದಿಗೆ ನೇಮಕವಾಗಿದ್ದು ಅಂದು ಸುಮಾರು ಮಧ್ಯಾಹ್ನ 1-30 ಗಂಟೆ ಸಮಯದಲ್ಲಿ ಮಹಾಲೇಖಪಾಲರ ಕಛೇರಿಯಲ್ಲಿ ಅಧಿಕಾರಿಣಿಯಾಗಿ ಕರ್ತವ್ಯ ನಿರ್ವಹಿಸುತ್ತಿರುವ ಮಹಿಳೆಯೊಬ್ಬರು ಚೌಕಿ ಬಳಿ ಹೋಗುತ್ತಿದ್ದಾಗ, ಆ ಮಹಿಳೆ ಬಗ್ಗೆ ಅಸಭ್ಯವಾಗಿ ಸಂಭಾಷಣೆ ಮಾಡಿದ್ದು, ಇದನ್ನು ಪ್ರಶ್ನಿಸಿದಾಗ ವಾಗ್ವಾದ ನಡೆದು ಜನರ ಗುಂಪು ಸೇರಿರುತ್ತದೆ. ಆಗ ಅಲ್ಲೇ ಇದ್ದ ಎ.ಎಸ್.ಐ. ಚಂದ್ರಶೇಖರ್ ರವರು ಮಹಿಳೆಗೆ ಸಮಾಧಾನ ಪಡಿಸಿರುತ್ತಾರೆ. ಹಾಗೂ ನೀವು ಕ್ಷಮೆಯಾಚಿಸಿರುತ್ತೀರಿ. ನೀವು ಶಿಸ್ತು ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಮಹಿಳೆಯ ಬಗ್ಗೆ ಅಸಭ್ಯವಾಗಿ ಸಂಭಾಷಣೆ ಮಾಡಿ ಅಗೌರವ ತೋರಿ, ಶಿಸ್ತು ಇಲಾಖೆಗೆ ಸಲ್ಲದ ದುರ್ನಡತೆ ಪ್ರದರ್ಶಿಸಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:13-12-2005ರ ಆದೇಶದಲ್ಲಿ ಅರ್ಜಿದಾರರು ವಿಧಾನ ಸೌಧ ಭದ್ರತೆ ಇವರ ಮೇಲಿನ ಆರೋಪಕ್ಕೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು ನಗರ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:08-09-2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಲ್ಮನವಿದಾರರಿಗೆ ದಿ:05-05-2005 ರಂದು ವಿಧಾನಸೌಧ ದಕ್ಷಿಣ ದ್ವಾರದ ಕಡೆ ಇರುವ ಚೌಕಿ ಬಳಿ ಪಿಸಿ-4777 ರವಿಕುಮಾರ್ ರವರೊಂದಿಗೆ ಕರ್ತವ್ಯಕ್ಕೆ ನೇಮಕವಾಗಿದ್ದು, ಮಧ್ಯಾಹ್ನ 1-30 ಗಂಟೆ ಸಯದಲ್ಲಿ ಮಹಾಲೇಖಪಾಲರ ಕಛೇರಿಯಲ್ಲಿ ಅಧಿಕಾರಿಣಿಯಾಗಿ ಕರ್ತವ್ಯ ನಿರ್ವಹಿಸುತ್ತಿರುವ ಕು.ಲಾವಣ್ಯ ಎಂಬುವರು ಚೌಕಿ ಬಳಿ ಹೋಗುತ್ತಿ ದ್ದಾಗ, ಈ ಇಬ್ಬರೂ ಪೊಲೀಸ್ ಪೇದೆಗಳು ಆ ಮಹಿಳಾ ಅಧಿಕಾರಿಯ ಬಗ್ಗೆ ಅಸಭ್ಯವಾಗಿ ಸಂಭಾಷಣೆ ಮಾಡಿದ್ದು, ಇದನ್ನು ಆ ಮಹಿಳೆ ಪ್ರಶ್ನಿಸಿದಾಗ ವಾಗ್ವಾದ ನಡೆದು ಜನರು ಗುಂಪು ಸೇರಿ ಅಲ್ಲೇ ಇದ್ದ ಎ.ಎಸ್.ಐ. ಚಂದ್ರಶೇಖರ್ ರವರು ಆ ಮಹಿಳೆಗೆ ಸಮಾಧಾನ ಮಾಡಿರುತ್ತಾರೆ. ಈ ಇಬ್ಬರೂ ಪೇದೆಗಳು ಕ್ಷಮೆಯಾಚಿಸಿರುತ್ತಾರೆ. ಈ ಬಗ್ಗೆ ಸಂಜೆವಾಣಿ ದಿನಪತ್ರಿಕೆಯಲ್ಲಿ ಪ್ರಕಟವಾಗಿರುತ್ತದೆ. ಅಲ್ಲದೇ ಈ ಬಗ್ಗೆ ಪಿಐ ವಿಧಾನಸೌಧ ಭದ್ರತೆ ರವರು ಸದರಿ ಮಹಿಳಾ ಅಧಿಕಾರಿಣಿಯನ್ನು ಸಂಪರ್ಕಿಸಿದಾಗ ಇದು ನಿಜವೆಂದು ತಿಳಿಸಿರುತ್ತಾರೆ. ಆದರೆ ಯಾವುದೇ ದೂರನ್ನು ನೀಡಲು ನಿರಾಕರಿಸಿರುತ್ತಾರೆ. ಈ ಬಗ್ಗೆ ಪಿಐ, ವಿಧಾನಸೌಧ ಭದ್ರತೆ ರವರು ವರದಿ ನೀಡಿರುತ್ತಾರೆ. ಆದ್ದರಿಂದ ಮೇಲ್ಮನವಿದಾರರ ಮೇಲಿನ ಆರೋಪವು ನಿಜವಾಗಿರುತ್ತದೆ. ಆದರೆ ಈಗ ಮೇಲ್ಮನವಿದಾರರು ವಿಧಿಸಿರುವ ಶಿಕ್ಷೆಯನ್ನು ರದ್ದುಪಡಿಸಿ ಬಹಿರಂಗ ವಿಚಾರಣೆ ಮಾಡಬೇಕೆಂದು ಹೇಳಿರುವುದು ಒಪ್ಪಲು ಬರುವುದಿಲ್ಲ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 64 ಪೊಸಿಅ 2008 ಬೆಂಗಳೂರು, ದಿನಾಂಕ: 13ನೇ ಮಾರ್ಚ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಚೂಡೇಗೌಡ, ಪಿಸಿ-3733, ವಿಧಾನಸೌಧ ಭದ್ರತೆ, ವಿಧಾನ ಸೌಧ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 479 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ**: ಶ್ರೀ ಮಾರಪ್ಪ, ಎಪಿಸಿ–1290, ಸಿಎಆರ್(ಕೇಂದ್ರ), ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ**:1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ(ಕೇಂದ್ರ) ಬೆಂಗಳೂರು,ಇವರ ಆದೇಶ ಸಂಖ್ಯೆ: ಡಿಇ/20/94–95 ದಿನಾಂಕ: 14–06–1995.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಸಿ.ಎ.ಆರ್ ಮತ್ತು ಭದ್ರತಾ ಪಡೆ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/35/95–96, ದಿನಾಂಕ:26–12–1995.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:08–05–2002.

4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)47/2002–03, ದಿನಾಂಕ: 31–03–2003.

5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ PSC 149 CNS 2007 dated:30–01–2008.

**ಪ್ರಸ್ತಾವನೆ**:

ಶ್ರೀ ಮಾರಪ್ಪ, ಎಪಿಸಿ–1290, ಸಿಎಆರ್(ಕೇಂದ್ರ), ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

1) Gross misconduct in that you PC 1290 A.Marappa have taken the Police vehicle No.KA 01 G 718 to Budamanahalli Village, Hesaragatta, Hobli, on 05-06-94 and caused accident to the said vehicle, resulting bleeding injuries to the inmates of the vehicle as also damages to the vehicle.
2) Gross misconduct and dereliction on duty in that you PC 1290 A.Marappa, Driver of the vehicle KA 01 G 718 have deserted the vehicle after leaving it, at M/s Maruthi Service Station, Indiranagar, without intimating to your superiors.
3) Gross misconduct in that you PC 1290 A.Marappa have taken the civilians in the Government Vehicle KA 01 G 718 on 05-06-94 from Budamanahalli Village(Rajanakunte) to Bangalore, as passengers.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪಿ ಪೊಲೀಸ್ ಅಧಿಕಾರಿ ಮೇಲಿನ ಆರೋಪವು ಸಾಭೀತಾಗಿರುವುದೆಂದು ಎಂದು ಅಭಿಪ್ರಾಯ ವ್ಯಕ್ತ ಪಡಿಸಿರುತ್ತಾರೆ, ಆ.ಪೊ.ಅ ರವರಿಗೆ ಭಾರತ ಸಂವಿಧಾನ ವಿಧಿ 311(2) ರಡಿ ಸಮಜಾಯಿಸಿ ಕೇಳಿ ಷೋಕಾಸ್ ನೋಟೀಸ್ ನೀಡಿ ಸಮರ್ಥಿಸಲು ಅವಕಾಶ ನೀಡಿದ್ದರು ಸಮಜಾಯಿಸಿ ಸರಿಯಿರುವುದಿಲ್ಲದ ಕಾರಣ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ(ಕೇಂದ್ರ), ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 14–06–1995ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸಿದೆ ಮತ್ತು ದಿನಾಂಕ:09–06–94 ರಿಂದ 31–03–95 ರವರೆಗೆ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದೆ ಹಾಗೂ ಸೇವೆಯಿಂದ ಕಡ್ಡಾಯವಾಗಿ ನಿವೃತ್ತಿಗೊಳಿಸಿದ ಆ.ಪೊ.ಅ ರವರಿಗೆ ಕೆ.ಸಿ.ಎಸ್.ಆರ್ ನಿಯಮ 218 ಟಿಪ್ಪಣಿ 1ರ ಮೇರೆಗೆ ಪೂರ್ಣ ವಿಕಲತಾ ನಿವೃತ್ತಿ ವೇತನ, ಡಿಸಿಆರ್‌ಜಿ ಯನ್ನು ನೀಡಬಹುದೆಂದು ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಸಿ.ಎ.ಆರ್ ಮತ್ತು ಭದ್ರತಾ ಪಡೆ, ಬೆಂಗಳೂರು ಇವರು ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ ಆ.ಪೊ.ಅ ರವರನ್ನು ಪುನರ್ ಕರ್ತವ್ಯಕ್ಕೆ ನೇಮಿಸಿ ಇವರ ವೇತನವನ್ನು ಪೊಲೀಸ್ ಪೇದೆ ಹುದ್ದೆಯ ವೇತನ ಶ್ರೇಣಿ ಕನಿಷ್ಟ ಮಟ್ಟಕ್ಕೆ ಹತ್ತು(10) ವರ್ಷಗಳ ಕಾಲ ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಇಳಿಸಿದೆ. ಅಲ್ಲಿಂದ ಅವರು ಹೊಸದಾಗಿ ವಾರ್ಷಿಕ ವೇತನ ಬಡ್ತಿಯನ್ನು ಪಡೆಯುವಂತೆ, ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದು, ಸೇವೆಯಿಂದ ಹೊರಗುಳಿದಿದ್ದ ದಿನದಿಂದ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಅವಧಿಯವರೆವಿಗೆ ಅವರ ಲೆಕ್ಕದಲ್ಲಿರುವ ರಜೆಯನ್ನಾಗಿ ಇಲ್ಲವೇ ಸಂಬಳ ರಹಿತ ರಜೆಯನ್ನಾಗಿ ಪರಿಗಣಿಸಲಾಗಿ, ಆ.ಪೊ.ಅ ಇನ್ನು ಮುಂದೆ ಯಾವುದೇ ವಾಹನದ ಚಾಲಕನಾಗಿ ನೇಮಿಸಬಾರದು, ಸಾಮಾನ್ಯ ಪೊಲೀಸ್ ಪೇದೆಯ ಕರ್ತವ್ಯವನ್ನು ನಿರ್ವಹಿಸಬೇಕು, ವಾಹನ ಚಾಲಕ ಲೈಸೆನ್ಸ್ (ಪರವಾನಿಗೆ) ತಕ್ಷಣದಿಂದ ರದ್ದುಗೊಳಿಸಿದೆ ಎಂದು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 26–12–1995 ರಲ್ಲಿ ಆದೇಶಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿ ಪರಿಶೀಲಿಸಲಾಗಿ, ಅರ್ಜಿದಾರರ ವೇತನವನ್ನು ಕನಿಷ್ಟ ಮಟ್ಟಕ್ಕೆ 10 ವರ್ಷಕ್ಕೆ ಇಳಿಸಿ ಹೊಸದಾಗಿ ವೇತನ ನಿಗದಿಪಡಿಸುವುದು ಅತಿ ಹೆಚ್ಚಿನ ಶಿಕ್ಷೆಯಾಗಿರುವುದರಿಂದ ಮೇಲ್ಮನವಿ ಪ್ರಾಧಿಕಾರ ವಿಧಿಸಿರುವ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಇವರ ವೇತನ ಬಡ್ತಿಯ ಮೂರು ಹಂತಗಳನ್ನು ಮುಂದಿನ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ದಂಡನೆ ವಿಧಿಸಿ, ಉಳಿದಂತೆ ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ, ಸೇವೆಯಿಂದ ಹೊರಗುಳಿದಿದ್ದ ದಿನದಿಂದ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಅವಧಿಯವರೆಗೆ ಅವರ ಲೆಕ್ಕದಲ್ಲಿರುವ ರಜೆಯನ್ನಾಗಿ ಇಲ್ಲವೆ ಸಂಬಳ ರಹಿತ ರಜೆಯನ್ನಾಗಿ ಪರಿಗಣಿಸಲು ಸರ್ಕಾರ ನಿರ್ಧರಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿನಾಂಕ: 30–01–2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಯನ್ನು ಮಾರ್ಪಡಿಸಿ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 179 ಪೊಸಿಅ 2002 ಬೆಂಗಳೂರು, ದಿ:10–03–2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೇಲ್ಮನವಿ ಪ್ರಾಧಿಕಾರ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ ಶ್ರೀ ಮಾರಪ್ಪ, ಎಪಿಸಿ–1290, ಸಿಎಆರ್(ಕೇಂದ್ರ), ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಭಾಗಶ: ಪುರಸ್ಕರಿಸಿ ಇವರ ವೇತನ ಬಡ್ತಿಯ ಮೂರು ಹಂತಗಳನ್ನು ಮುಂದಿನ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ದಂಡನೆ ವಿಧಿಸಿ ಹಾಗೂ ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ ಇವರು ಸೇವೆಯಿಂದ ಹೊರಗುಳಿದಿದ್ದ ದಿನದಿಂದ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವ ಅವಧಿಯವರೆಗೆ ಅವರ ಲೆಕ್ಕದಲ್ಲಿರುವ ರಜೆಯನ್ನಾಗಿ ಅಥವಾ ಸಂಬಳರಹಿತ ರಜೆಯನ್ನಾಗಿ ಪರಿಗಣಿಸುವಂತೆ ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 149 ಸಿಎನ್‌ಎಸ್ 2007 ದಿನಾಂಕ: 30–01–2008 ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 439

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಜೈರಾಮ ಸಿಪಿಸಿ-571 ಶಹಬಾದ ಪೊಲೀಸ್ ಪೊಲೀಸ್ ಠಾಣೆ, ಗುಲ್ಬರ್ಗಾ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಪಿಆರ್/121/2006 ದಿನಾಂಕ:01-07-2006
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು 95/ಈವ/2006 ದಿನಾಂಕ:19-09-2006
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:04-10-2007
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)96/2007-08 , ದಿನಾಂಕ:14-02-2008

**ಪ್ರಸ್ತಾವನೆ:**

ಶ್ರೀ.ಜೈರಾಮ ಸಿಪಿಸಿ-571 ಶಹಬಾದ ಪೊಲೀಸ್ ಪೊಲೀಸ್ ಠಾಣೆ, ಗುಲ್ಬರ್ಗಾ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:-**

ಶ್ರೀ.ಜೈರಾಮ ಸಿಪಿಸಿ-571 ಶಹಬಾದ ಪೊಲೀಸ್ ಪೊಲೀಸ್ ಠಾಣೆ, ಗುಲ್ಬರ್ಗಾ, ರವರು ದಿ:27-03-2006 ರಿಂದ 10-05-2006 ರವರೆಗೆ ಒಟ್ಟು 45 ದಿವಸಗಳವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯ ಲೋಪ, ನಿರ್ಲಕ್ಷ್ಯತನ ಪ್ರದರ್ಶಿಸಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 01-07-2006ರ ಆದೇಶದಲ್ಲಿ ಅರ್ಜಿದಾರರು ದಿ:27-03-2006 ರಿಂದ 10-05-2006 ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ ಸಂಬಳ ರಹಿತ ರಜೆ ಎಂದು ಪರಿಗಣಿಸಿ ಮತ್ತು ಸದರಿಯವರ ವಾರ್ಷಿಕ ವೇತನ ಮುಂದಿನ ವಾರ್ಷಿಕ ವೇತನಕ್ಕೆ ಪರಿಣಾಮ ಬೀರದಂತೆ 3 ತಿಂಗಳ ಕಾಲ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:19-09-2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ದಿ: 27-03-2006 ರಿಂದ 10-05-2006 ರವರೆಗೆ ರಜೆ ಮಂಜೂರು ಮಾಡಿಸಿಕೊಳ್ಳದೆ, ಅನಧಿಕೃತವಾಗಿ ಗೈರುಹಾಜರಾಗಿ ರುವುದರಿಂದ ಈ ಅವಧಿಯನ್ನು ಸಂಬಳ ರಹಿತ ರಜೆಯೆಂದು ಪರಿಗಣಿಸಿ, ಇವರ ವಾರ್ಷಿಕ ವೇತನ ಬಡ್ತಿಯನ್ನು 3 ತಿಂಗಳ ಕಾಲ ಮಾತ್ರ ಮುಂದೂಡಲಾಗಿದೆ. ಸದರಿಯವರು ವೈದ್ಯಕೀಯ ರಜೆ ಪಡೆದುಕೊಂಡಿದ್ದಲ್ಲಿ ಅದನ್ನು ಮೇಲಾಧಿಕಾರಿಗಳಿಗೆ ತಿಳಿಸಬಹುದಾಗಿತ್ತು. ಆದ್ದರಿಂದ ಅನಧಿಕೃತ ಗೈರು ಹಾಜರಿಯನ್ನು ಸಂಬಳ ರಹಿತ ರಜೆಯೆಂದು ಪರಿಗಣಿಸುವುದು ಸೂಕ್ತವಾಗಿದ್ದು, ಇವರ ವಾರ್ಷಿಕ ವೇತನ ಬಡ್ತಿಯನ್ನು 3 ತಿಂಗಳ ಕಾಲ ಮಾತ್ರ ಮುಂದೂಡಲಾಗಿದ್ದು, ಇದು ಕಡಿಮೆ ಶಿಕ್ಷೆಯಾಗಿರುತ್ತದೆ. ಇದರಲ್ಲಿ ಹಸ್ತಕ್ಷೇಪ ಮಾಡಲು ಸಕಾರಣಗಳು ಕಂಡು ಬರುತ್ತಿಲ್ಲ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 63 ಪೊಸಿಅ 2008 ಬೆಂಗಳೂರು, ದಿನಾಂಕ: 10ನೇ ಮಾರ್ಚ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಜೈರಾಮ ಸಿಪಿಸಿ-571 ಶಹಬಾದ ಪೊಲೀಸ್ ಠಾಣೆ, ಗುಲ್ಬರ್ಗಾ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 441

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ**: ಶ್ರೀ ವೈ.ಕೆ.ತಳವಾರ, ಸಿ.ಪಿ.ಸಿ–2004, ಬೆಳಗಾವಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ**: 1) ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕಾಧೀಕ್ಷಕರು, ಬೆಳಗಾವಿ ಜಿಲ್ಲೆ ಬೆಳಗಾವಿ ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಇವಿ/25/2004 ದಿನಾಂಕ: 17–11–2005.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು/57/ಉವ/205 ದಿನಾಂಕ: 04–12–2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:13–02–2007.

4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)160/2006–07, ದಿನಾಂಕ: 09–05–2007.

5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ PSC 190 CNS 2007 dated: 30–01–2008.

**ಪ್ರಸ್ತಾವನೆ:**

ಶ್ರೀ ವೈ.ಕೆ.ತಳವಾರ, ಸಿ.ಪಿ.ಸಿ–2004, ಬೆಳಗಾವಿ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

1) ಶ್ರೀ ವೈ.ಕೆ.ತಳವಾರ, ಸಿ.ಪಿ.ಸಿ–2004, ಬೆಳಗಾವಿ ಜಿಲ್ಲೆ ರವರು ದೈನಂದಿನ ಕರ್ತವ್ಯಕ್ಕೆ ಸರಿಯಾಗಿ ವೇಳೆಗೆ ಅನುಸಾರವಾಗಿ ಬರದೇ ತಡವಾಗಿ ಬರುವುದು, ಮೇಲಿಂದ ಮೇಲೆ ಕರ್ತವ್ಯಕ್ಕೆ ಗೈರು ಹಾಜರ ಉಳಿಯುವುದು ಮತ್ತು ಗೈರು ಹಾಜರ ಉಳಿದ ಬಗ್ಗೆ ನಿಮಗೆ ಠಾಣಾಧಿಕಾರಿಗಳು ವಿಚಾರಿಸಲು ಅವರೊಂದಿಗೆ ಉದ್ಧಟತನದಿಂದ ಮಾತನಾಡಿವುದು ಹಾಗೂ ಸಿಬ್ಬಂದಿಯೊಂದಿಗೆ ಸರಿಯಾಗಿ ಕರ್ತವ್ಯ ಮಾಡದೇ ಅವರೊಂದಿಗೂ ಸಹ ಜಗಳ ಮಾಡುವುದು, ದಿನಾಂಕ:28–03–2004 ರಂದು ರಾತ್ರಿ ಗಸ್ತು ಕರ್ತವ್ಯಕ್ಕೆ ನೇಮಿಸಿದಾಗ ಬೀಟ್ ಭಾಗದಲ್ಲಿ ಮಲಗಿದ್ದು ವಿವರಣೆ ಕೇಳಲಾಗಿ, ತಾವೇನು ಮಲಗಿಲ್ಲ ಯಾವುದೇ ಆಲಕ್ಷತನ ಮಾಡಿಲ್ಲ ಹಾಗೂ ಯಾವುದೇ ತರಹದ ಅಪರಾಧ ಸಂಭವಿಸಿರುವುದಿಲ್ಲ ಅಂತಾ ಉದ್ಧಟತನದ ಉತ್ತರ ನೀಡಿದ್ದಲ್ಲದೇ ಪ್ರತಿಸಲ ರಾತ್ರಿ ಗಸ್ತು ಕರ್ತವ್ಯದಲ್ಲಿದ್ದಾಗ ಕರ್ತವ್ಯಕ್ಕೆ ಸಾರಾಯಿ ಕುಡಿದು ಬಂದು ಮಲಗುವುದು, ದಿನಾಂಕ:10–05–2004 ರಂದು ವಾರದ ಕವಾಯತಕ್ಕೆ ಗೈರ ಹಾಜರ ಉಳಿದಿದ್ದು, ಹಾಗೂ ದಿನಾಂಕ:05–06–2004 ರಂದು ಗಸ್ತು ಕರ್ತವ್ಯಕ್ಕೆ ಗೈರ ಹಾಜರ ಉಳಿದಿದ್ದು ಈ ಬಗ್ಗೆ ಠಾಣಾಧಿಕಾರಿ ಜ್ಞಾಪನ ಪತ್ರ ನೀಡಿ ವಿವರಣೆ ಕೇಳಲು ಈ ಬಗ್ಗೆ ಯಾವುದೇ ವಿವರಣೆ ನೀಡದೇ ಠಾಣೆಯ ಸಿಬ್ಬಂದಿಯವರ ಮುಂದೆ ಠಾಣಾಧಿಕಾರಿಯವರಿಗೆ ಉದ್ದಟತನದಿಂದ ಮಾತನಾಡಿ ನಿಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿ, ನಿರ್ಲಕ್ಷತೆ, ಅಶಿಸ್ತು ಉಧಾಸೀನತೆ ಪ್ರದರ್ಶಿಸಿರುವುದಾಗಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣೆಯಲ್ಲಿ ಸಾಕ್ಷ್ಯಾಂಶ ಹಾಗೂ ಆಧಾರಗಳ ಮೇಲಿಂದ ದೃಢಪಟ್ಟಿರುವುದರಿಂದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕಾಧೀಕ್ಷಕರು, ಬೆಳಗಾವಿ ರವರು ಆ.ಪೊ.ಅ ಇವರ ವೇತನವನ್ನು ಸಿಪಿಸಿ ಹುದ್ದೆಯ ಕನಿಷ್ಟ ವೇತನಕ್ಕೆ ಇಳಿಸಲಾಗಿದೆ, ಹೊಸದಾಗಿ ವೇತನ ಬಡ್ತಿಗಳನ್ನು ಗಳಿಸಿವುದು, ದಿನಾಂಕ:06–09–2004 ರಿಂದ 22–09–2004 ರವರೆಗೆ ಸೇವೆಯಿಂದ ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ ಎಂದು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 17–11–05 ರಲ್ಲಿ ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿ ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 04–12–2005 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿ ಪರಿಶೀಲಿಸಲಾಗಿ, ಆ.ಪೊ.ಅ ಇವರು ಗೈರು ಹಾಜರಾಗಿರುವುದು ವಿಚಾರಣಾಧಿಕಾರಿಗಳ ವರದಿ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರವು ವಿಧಿಸಿರುವ ಶಿಕ್ಷೆ ಕೆ.ಸಿ.ಎಸ್.ಆರ್ ನಿಯಮ 59(1) ರನ್ವಯ ನಿಯಮಬಾಹಿರವಾಗುರುತ್ತದೆ. ಯಾವುದೇ ನೌಕರರ ವೇತನ ಶ್ರೇಣಿಯನ್ನು ಅನಿರ್ದಿಷ್ಟ ಕಾಲ ಕನಿಷ್ಟ ಮೂಲ ವೇತನಕ್ಕೆ ನಿಗದಿಪಡಿಸಲು ಅವಕಾಶವಿಲ್ಲ. ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನಾದೇಶವನ್ನು ರದ್ದುಪಡಿಸಿ ಆ.ಪೊ.ಅ ಇವರ ಎರಡು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಲು ಹಾಗೂ ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲು ಸರ್ಕಾರ ನಿರ್ಧರಿಸಿದೆ, ಇದನ್ನು ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿನಾಂಕ:30–01–2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 197 ಪೊಸಿಅ 2007 ಬೆಂಗಳೂರು, ದಿನಾಂಕ 19ನೇ ಫೆಬ್ರವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನೆಯನ್ನು ಬಾಗಶ: ಮಾರ್ಪಡಿಸಿ ಶ್ರೀ ವೈ.ಕೆ.ತಳವಾರ, ಸಿ.ಪಿ.ಸಿ–2004, ಬೆಳಗಾವಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಇವರ ಎರಡು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಲು ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೇಂದೆ ಪರಿಗಣಿಸಿದೆ ಎಂದು ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 190 ಸಿಎಸ್‌ಎಸ್ 2007 ದಿನಾಂಕ: 30–01–2008 ರನ್ವಯ ಹೊರಡಿಸಲಾಗಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 413 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಮಲ್ಲಿನಾಥ್ ಎಪಿಸಿ-145, ಡಿಎಆರ್ ಗುಲ್ಬರ್ಗಾ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಪಿಆರ್/366/06-2007 ದಿನಾಂಕ:08-02-2007

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು 33/ಈವ/2007 ದಿನಾಂಕ:05-04-2007

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:15-10-2007

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)90/2007-08, ದಿನಾಂಕ:07-01-2008

**ಪ್ರಸ್ತಾವನೆ:**

ಶ್ರೀ.ಮಲ್ಲಿನಾಥ್ ಎಪಿಸಿ-145, ಡಿಎಆರ್ ಗುಲ್ಬರ್ಗಾ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:-**

ಶ್ರೀ.ಮಲ್ಲಿನಾಥ್ ಎಪಿಸಿ-145, ಡಿಎಆರ್ ಗುಲ್ಬರ್ಗಾ ರವರು ದಿ:01-05-2006 ರಿಂದ 31-10-2006 ರವರೆಗೆ ಒಟ್ಟು 184 ದಿನಗಳಿಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯ ಲೋಪ, ನಿರ್ಲಕ್ಷ್ಯತನ ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 07-12-2007ರ ಆದೇಶದಲ್ಲಿ ಅರ್ಜಿದಾರರು ದಿ: 01-05-2006 ರಿಂದ 31-10-2006 ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ ಸಂಬಳ ರಹಿತ ರಜೆ ಮತ್ತು ಸದರಿಯವರ ವಾರ್ಷಿಕ ವೇತನ ಮುಂದಿನ ವಾರ್ಷಿಕ ವೇತನಕ್ಕೆ ಪರಿಣಾಮ ಬೀರದಂತೆ 18 ತಿಂಗಳ ಕಾಲ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:05-04-2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು 6 ತಿಂಗಳ ಅವಧಿಗೆ ಗೈರು ಹಾಜರಾಗಿದ್ದು, ಚಿಕಿತ್ಸೆ ಪಡೆಯುತ್ತಿದ್ದಲ್ಲಿ ಮೇಲಾಧಿಕಾರಿಗಳಿಗೆ ತಿಳಿಸಬಹುದಾಗಿತ್ತು. ಸಿ.ಆ.ಸು.ಇ. ಸುತ್ತೋಲೆ ಸಂ:ಸಿಆಸುಇ 18 ಸೇಇವಿ 2001, ದಿ:14-09-2001ರ ಪ್ರಕಾರ 4 ತಿಂಗಳಿಗಿಂತ ಹೆಚ್ಚಿನ ಅವಧಿಗೆ ಅನಧಿಕೃತ ಗೈರು ಹಾಜರಿಗೆ ಕೆಲಸದಿಂದ ವಜಾಮಾಡುವ ಶಿಕ್ಷೆ ವಿಧಿಸ ಬಹುದಾಗಿರುತ್ತದೆ. ಆದರೆ ಅರ್ಜಿದಾರರು 6 ತಿಂಗಳ ಅವಧಿಗೆ ಗೈರು ಹಾಜರಾಗಿದ್ದು, ಅವರಿಗೆ ಈಗಾಗಲೇ ಕಡಿಮೆ ಪ್ರಮಾಣದ ಶಿಕ್ಷೆ ವಿಧಿಸಲಾಗಿದೆ. ಆದ್ದರಿಂದ ಇದನ್ನು ಪುನರ್ ಪರಿಶೀಲಿಸಲು ಯಾವುದೇ ಸೂಕ್ತ ಕಾರಣಗಳನ್ನು ನೀಡಿರುವುದಿಲ್ಲ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 39 ಪೊಸಿಅ 2007 ಬೆಂಗಳೂರು, ದಿನಾಂಕ:01-03-2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಮಲ್ಲಿನಾಥ್ ಎಪಿಸಿ-145, ಡಿಎಆರ್ ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 418 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಮಂಡ್ಯ ಜಿಲ್ಲೆ ಇವರ ಆದೇಶ ಸಂಖ್ಯೆ:ಸಿಬ್ಬಂದಿ(2)ಪಿಆರ್_4:2006-07 ದಿನಾಂಕ:30-05-2007.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ:ಅಪೀಲು 33/2007-08 ದಿನಾಂಕ:20-11-2007

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10-01-2008

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)130/2007-08 ದಿನಾಂಕ:01-03-2008

**ಪ್ರಸ್ತಾವನೆ:**

ಶ್ರೀ.ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ರ ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:-**

ಶ್ರೀ.ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ ಸಂಚಾರಿ ಠಾಣೆ-2 (ಹಾಲಿ ಬಿಂಡಿಗನವಿಲೆ ಠಾಣೆ), ಇವರು ಕರ್ತವ್ಯ ನಿರ್ವಹಿಸುತ್ತಿದ್ದು, ದಿ:17-03-2007ರಂದು ಪಿ.ಎಸ್.ಐ. ಟ್ರಾಫಿಕ್-1, ಶ್ರೀ.ಜಿ.ಕೃಷ್ಣಮೂರ್ತಿ ರವರು ವರ್ಗಾವಣೆಯಾಗಿದ್ದರಿಂದ ಠಾಣೆಯ ಪ್ರಭಾರವನ್ನು ವಹಿಸಿಕೊಳ್ಳುವಂತೆ ಅಂದು ರಾತ್ರಿ 9-00 ಗಂಟೆಯಲ್ಲಿ ಡಿ.ಎಸ್.ಪಿ. ಮಂಡ್ಯ ಉಪವಿಭಾಗ ರವರು ದೂರವಾಣಿಯಲ್ಲಿ ಇವರಿಗೆ ಸೂಚಿಸಿರುತ್ತಾರೆ. ಆದರೆ ಇವರು ಮೇಲಾಧಿಕಾರಿಗಳ ಸೂಚನೆ ಉಲ್ಲಂಘನೆ ಮಾಡುವುದರ ಮೂಲಕ ತಮ್ಮ ಕರ್ತವ್ಯದಲ್ಲಿ ಅತೀವ ಬೇಜವಾಬ್ದಾರಿತನ ಹಾಗೂ ಘೋರ ನಿರ್ಲಕ್ಷತನವನ್ನು ಪ್ರದರ್ಶಿಸಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂಪೊಲೀಸ್ ಸೂಪರಿಂಟೆಂಡೆಂಟ್, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:30-05-2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಕಾಲ ನಂತರದ ವೇತನ ಬಡ್ತಿಗೆ ಯಾವುದೇ ಪರಿಣಾಮ ಬೀರದಂತೆ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:20-11-2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ದಿ:17-03-2007 ರಂದು ಪಿ.ಎಸ್.ಐ. ಟ್ರಾಫಿಕ್ ಶ್ರೀ.ಕೃಷ್ಣಮೂರ್ತಿ ರವರು ವರ್ಗಾವಣೆಯಾಗಿದ್ದರಿಂದ ಠಾಣೆಯ ಪ್ರಭಾರವನ್ನು ವಹಿಸಿಕೊಳ್ಳುವಂತೆ ಡಿ.ವೈ.ಎಸ್.ಪಿ. ಮಂಡ್ಯ ರವರು ದೂರವಾಣಿಯಲ್ಲಿ ಇವರಿಗೆ ಸೂಚಿಸಿರುತ್ತಾರೆ. ಆದರೆ ಇವರು ಪ್ರಭಾರವನ್ನು ವಹಿಸಿಕೊಳ್ಳದೇ ಠಾಣೆಗೂ ಸಹ ಬರದೇ ಮೇಲಾಧಿಕಾರಿಗಳ ಸೂಚನೆಗಳನ್ನು ಉಲ್ಲಂಘನೆ ಮಾಡಿ, ಕರ್ತವ್ಯದಲ್ಲಿ ಬೇಜವಾಬ್ದಾರಿತನ ಹಾಗೂ ಅಶಿಸ್ತನ್ನು ಪ್ರದರ್ಶಿಸಿರುತ್ತಾರೆ. ಅಂದು ತಮಗೆ ಹಲ್ಲುನೋವು ಇತ್ತು ಮತ್ತು ವೈದ್ಯರಿಂದ ಚಿಕಿತ್ಸೆ ಪಡೆದಿರುವುದಾಗಿ ಇವರು ತಿಳಿಸಿರುತ್ತಾರೆ. ಆದರೆ ಈ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರ ನೀಡಿರುವುದಿಲ್ಲ. ದೂರವಾಣಿ ಮೂಲಕ ಈ ವಿಷಯವನ್ನು ಮೇಲಾಧಿಕಾರಿಗಳಿಗೆ ತಿಳಿಸಬಹುದಾಗಿತ್ತು. ಇವರ ಈ ದೋಷಾರೋಪಣೆಗೆ ಅವರ ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಕಾಲ ಮುಂದಿನ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಮುಂದೂಡುವ ಶಿಕ್ಷೆ ನೀಡಲಾಗಿದ್ದು, ಇದು ಕಡಿಮೆ ಪ್ರಮಾಣದ ಶಿಕ್ಷೆಯಾಗಿರುತ್ತದೆ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 87 ಪೊಸಿಅ 2008 ಬೆಂಗಳೂರು, ದಿನಾಂಕ:31-03-2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 642 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಎಂ.ಜಿ.ತಡಕೋಡ, ಪಿ.ಐ., ಶಹರ ಪೊಲೀಸ್ ಠಾಣೆ, ಹುಬ್ಬಳ್ಳಿ, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ-ಧಾರವಾಡ, ಇವರ ಆದೇಶ ಸಂಖ್ಯೆ:ಸಿಪಿ/ಸಿಬ್ಬಂದಿ-3/ನಿಯಮ-6/03/2006-07 ದಿನಾಂಕ:29-11-2006.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು, ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬಿ(8)59/2006-07 ದಿನಾಂಕ:05-04-2007

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:17-12-2007

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ(8)59/2006-07 ದಿನಾಂಕ:29-02-2008

**ಪ್ರಸ್ತಾವನೆ:**

ಶ್ರೀ.ಎಂ.ಜಿ.ತಡಕೋಡ, ಪಿ.ಐ., ಶಹರ ಪೊಲೀಸ್ ಠಾಣೆ, ಹುಬ್ಬಳ್ಳಿ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ರ ನಿಯಮ 6 & 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:-**

ಶ್ರೀ.ಎಂ.ಜಿ.ತಡಕೋಡ, ಪಿ.ಐ., ಶಹರ ಪೊಲೀಸ್ ಠಾಣೆ, ಹುಬ್ಬಳ್ಳಿ, ನೀವು ಹಾಗೂ ಶ್ರೀ.ಎಂ.ಎಲ್.ಬುಡನ್ ಖಾನ್, ಪಿ.ಎಸ್.ಐ. ಕರ್ತವ್ಯ ನಿರ್ವಹಿಸುತ್ತಿರುವಾಗ ದಿ:15-01-2006 ರಂದು ಘಂಟಿಕೇರಿ ಪೊಲೀಸ್ ಠಾಣೆಯಲ್ಲಿ ದಾಖಲಾದ ಗುನ್ನಾ ಸಂಖ್ಯೆ:07/2006 ಕಲಂ 323, 324, 504 ಸಹಕಲಂ 34 ಐಪಿಸಿ ನೇದ್ದರಲ್ಲಿ ಫಿರ್ಯಾದಿ ಶ್ರೀ.ವಿಶಾಲ ತಂದೆ ಗುರುನಾಥ ಮುರುಗೋಡ ಸಾ ಹುಬ್ಬಳ್ಳಿ ಇವರ ಮೇಲೆ ಆರೋಪಿತರು ಮರಣಾಂತಿಕ ಹಲ್ಲೆ ನಡೆಸಿದ್ದರು ಸಹ ನೀವು ಸದರಿ ಪ್ರಕರಣದಲ್ಲಿ ಕಲಂ 307 ಐಪಿಸಿ ಅಳವಡಿಸದೆ ಆರೋಪಿತರೊಂದಿಗೆ ಶ್ಯಾಮೀಲ ಆಗಿ ಕೇವಲ 323, 324, 504 ಸಹಕಲಂ 34 ಐ.ಪಿ.ಸಿ.ಯನ್ನು ಅಳವಡಿಸಿದ್ದು ಅಲ್ಲದೇ ಗಾಯ ಹೊಂದಿದ ಫಿರ್ಯಾದಿಯು ಆಸ್ಪತ್ರೆಯಲ್ಲಿ ತುರ್ತು ಚಿಕಿತ್ಸಾ ವಿಭಾಗದಲ್ಲಿ ಉಪಚಾರದಲ್ಲಿ ಇದ್ದರೂ ಕೂಡಾ, ಆರೋಪಿತರನ್ನು ಜ್ಯಾಮೀನಿನ ಮೇಲೆ ಬಿಡಬಾರದು ಅಂತಾ ರಿಮಾಂಡ ಯಾದಿಯಲ್ಲಿ ನಮೂದಿಸದೇ ಇರುವುದರಿಂದ ಮಾನ್ಯ ನ್ಯಾಯಾಲಯವು ಆರೋಪಿತರನ್ನು ಜ್ಯಾಮೀನಿನ ಮೇಲೆ ಬಿಟ್ಟಿರುತ್ತದೆ ಎಂಬ ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ - ಧಾರವಾಡ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:29-11-2006ರ ಆದೇಶದಲ್ಲಿ ಅರ್ಜಿದಾರರ ಮೂಲ ವೇತನವನ್ನು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಯಲ್ಲಿನ ವೇತನ ಶ್ರೇಣಿಯ ಕನಿಷ್ಟ ಹಂತಕ್ಕೆ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮಾಡಿ, ನಾಲ್ಕು ವರ್ಷಗಳ ಕಾಲ ಇಳಿಸಲಾಗಿದೆ ಹಾಗೂ ಈ ಶಿಕ್ಷೆಯ ಅವಧಿಯಲ್ಲಿ ಸದರಿಯವರು ಯಾವುದೇ ಮುಂಬಡ್ತಿಗೆ ಅರ್ಹರಿರುವುದಿಲ್ಲ ಮತ್ತು ಎಂ.ಎಲ್.ಬುಡನ್‌ಖಾನ ಪಿ.ಎಸ್.ಐ., ಘಂಟಿಗೇರಿ ಪೊಲೀಸ್ ಠಾಣೆ, ರವರ ಮೂಲ ವೇತನವನ್ನು ಅವರು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಯಲ್ಲಿನ ವೇತನ ಶ್ರೇಣಿಯ ಕನಿಷ್ಟ ಹಂತಕ್ಕೆ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮಾಡಿ ಇಳಿಸಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು, ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ

ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:05-04-2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಲ್ಮನವಿ ಪ್ರಾಧಿಕಾರವು ಈಗಾಗಲೇ ವಿಧಿಸಿದ ಶಿಕ್ಷೆಯನ್ನು ಕಡಿಮೆ ಮಾಡಿದ್ದು, ಇದನ್ನು ಇನ್ನಷ್ಟು ಕಡಿಮೆ ಮಾಡಲು ಕಾರಣಗಳನ್ನು ನೀಡಿರುವುದಿಲ್ಲ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 93 ಪೊಸಿಅ 2008 ಬೆಂಗಳೂರು, ದಿನಾಂಕ: 04ನೇ ಏಪ್ರಿಲ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಎಂ.ಜಿ.ತಡಕೋಡ, ಪಿ.ಐ., ಶಹರ ಪೊಲೀಸ್ ಠಾಣೆ, ಹುಬ್ಬಳ್ಳಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 639

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ**: ಶ್ರೀ ಎಸ್.ಆರ್.ರೋಗಿ, ಸಿಪಿಸಿ–1827, ಕ್ಯಾಂಪ್ ಪೊಲೀಸ್ ಠಾಣೆ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ**:1) ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕಾಧೀಕ್ಷಕರು, ಬೆಳಗಾವಿ ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಇವಿ/24/2005, ದಿನಾಂಕ: 28–07–2006.

2) ಮೇಲ್ಮನವಿ ಪ್ರಾಧಿಕಾರಿ ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು/132/ಉವ/2007 ದಿನಾಂಕ:17–04–2007.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:09–07–2007.

4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/54/2007–08, ದಿನಾಂಕ: 25–03–2008.

**ಪ್ರಸ್ತಾವನೆ**:

ಶ್ರೀ ಎಸ್.ಆರ್.ರೋಗಿ, ಸಿಪಿಸಿ–1827, ಕ್ಯಾಂಪ್ ಪೊಲೀಸ್ ಠಾಣೆ, ಬೆಳಗಾವಿ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ**:–

ಶ್ರೀ ಎಸ್.ಆರ್.ರೋಗಿ, ಸಿಪಿಸಿ–1827, ಕ್ಯಾಂಪ್ ಪೊಲೀಸ್ ಠಾಣೆ, ಬೆಳಗಾವಿ ರವರು ಹಾಗೂ ಶ್ರೀ ಆರ್.ಹೆಚ್. ಇನಾಮದಾರ್, ಸಿಪಿಸಿ–2427, ಎಪಿಎಂಸಿ ಠಾಣೆ ಬೆಳಗಾವಿ ಮತ್ತು ಶ್ರೀ ಎ.ಬಿ.ಪಾಂಡವ, ಸಿಪಿಸಿ–1707, ಸಂಚಾರಿ ದಕ್ಷಿಣ ಬೆಳಗಾವಿ ರವರೊಂದಿಗೆ ದಿನಾಂಕ:14–09–2005 ರಂದು ಸಮವಸ್ತ್ರದಲ್ಲಿದ್ದಾಗ ರಾತ್ರಿ 2340 ಗಂಟೆಯ ಸುಮಾರಿಗೆ ಬೆಳಗಾವಿ ಜಿಲ್ಲೆಯ ಖಡೇಬಜಾರ ಪೊಲೀಸ್ ಠಾಣೆಯ ವ್ಯಾಪ್ತಿಯ ಶಿವಾಜಿ ರಸ್ತೆಯಲ್ಲಿರುವ ಗಾರ್ಡನ್ ಗೇಟ್ ಬಾರ್ ಮತ್ತು ರೆಸ್ಟೋರೆಂಟ್‌ನೇದ್ದರ ಬಾಗಿಲು ಮುಚ್ಚಿದ್ದರೂ ಸದರಿ ಮುಚ್ಚಿದ ಬಾಗಿಲನ್ನು ಒತ್ತಾಯಪೂರ್ವಕವಾಗಿ ತೆಗೆಯಿಸಿ ಬಾರಿನ ಒಳಗೆ ಇದ್ದ ಅರುಣ ಕುಮಾರ ಶೆಟ್ಟಿ ಇವರಿಗೆ ಹೆದರಿಸಿ ಬಾರ್‌ನಲ್ಲಿದ ಓಲ್ಡಮಂಕ್ ರಮ್ ಕ್ವಾಟರ ಬಾಟಲಿಗಳನ್ನು ತೆಗೆದುಕೊಂಡು ಸಮವಸ್ತ್ರದಲ್ಲಿಯೇ ಬಾರ್‌ನಲ್ಲಿ ಕುಳಿತುಕೊಂಡು ಸಾರಾಯಿ ಕುಡಿದು ಹಣವನ್ನು ಕೊಡದೇ ಸದರಿಯವರಿಗೆ ಉದ್ದೇಶಿಸಿ ನಾವು ಪೊಲೀಸರು ನಮಗೆ ಬಿಲ್ಲು ಕೇಳ್ತಿರಾ ಅಂತಾ ನುಡಿದು, ಹೆದರಿಸಿ, ಬೆದರಿಸಿ ಹಣವನ್ನು ಕೊಡದೇ ಹಾಗೇಯೇ ಹೋಗಿ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ ಪ್ರದರ್ಶಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಆ.ಪೊ.ಅ ರವರ ವಿವರಣೆ ತೃಪ್ತಿಕರವಾಗಿರುವುದಿಲ್ಲದ ಕಾರಣ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕಾಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:28–07–2006ರ ಆದೇಶದಲ್ಲಿ ಶ್ರೀ.ಎಸ್.ಆರ್.ರೋಗಿ, ಸಿಪಿಸಿ–1827, ಬೆಳಗಾವಿ ರವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಲಾಗಿದೆ ಹಾಗೂ 15–09–2005 ರಿಂದ 26–10–2005 ರವರೆಗೆ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಎಂದು ಪರಿಗಣಿಸಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿ ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಮೇಲ್ಮನವಿದಾರರ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಶಿಸ್ತು ಪ್ರಾಧಿಕಾರವು ವಿಧಿಸಿರುವ ಶಿಕ್ಷೆ ಸಮರ್ಪಕವಾಗಿರುವುದರಿಂದ ಹಾಗೂ ಪರಿಗಣಿಸಲು ಯಾವುದೇ ಅಂಶಗಳು ಕಂಡುಬಾರದೇ ಇರುವುದರಿಂದ ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 17–04–2007 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿ, ಶ್ರೀ ಎಸ್.ಆರ್.ರೋಗಿ, ಸಿಪಿಸಿ–1827 ರವರು ಜೆ.ಎಂ.ಎಫ್.ಸಿ ನ್ಯಾಯಾಲಯವು ತಮ್ಮನ್ನು ದೋಷಾಮುಕ್ತರನ್ನಾಗಿ ಮಾಡಿರುವುದರಿಂದ ತಮ್ಮ ಶಿಕ್ಷೆಯನ್ನು ರದ್ದುಗೊಳಿಸಲು ಅರ್ಜಿದಾರರು ಕೋರಿರುತ್ತಾರೆ. ಆದರೆ, ಇಲಾಖಾ ವಿಚಾರಣೆ ಮತ್ತು ನ್ಯಾಯಾಂಗ ವಿಚಾರಣೆಗಳು ಬೇರೆಬೇರೆ ಪ್ರಕರಣಗಳಾಗಿದ್ದು. ನ್ಯಾಯಾಲಯವು ದೋಷಮುಕ್ತ ಮಾಡಿದ ಮಾತ್ರಕ್ಕೆ ಇಲಾಖಾ ವಿಚಾರಣೆಯಲ್ಲಿಯೂ ದೋಷಮುಕ್ತ ಮಾಡಬೇಕೆಂಬ ಬಗ್ಗೆ ನಿಯಮಗಳಿರುವುದಿಲ್ಲ. ಅರ್ಜಿದಾರರು ಜವಾಬ್ದಾರಿಯುತ ಪೋಲೀಸ್ ಅಧಿಕಾರಿಯಾಗಿದ್ದು, ಬಾರ್‌ನ ಬಾಗಿಲು ಮುಚ್ಚಿದರೂ ಸಹ ಒತ್ತಾಯಪೂರ್ವಕವಾಗಿ ಬಾಗಿಲನ್ನು ತೆರೆಸಿ ಸಮವಸ್ತ್ರದಲ್ಲಿಯೇ ಬಾರ್‌ನಲ್ಲಿ ಕುಳಿತುಕೊಂಡು, ಸಾರಾಯಿ ಕುಡಿದು ಹಣವನ್ನು ಕೊಡದೇ ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿದ್ದು, ಶಿಕ್ಷೆಯನ್ನು ಕಡಿಮೆ ಮಾಡಲು ಯಾವುದೇ ದಾಖಲೆಗಳನ್ನು ಅಥವಾ ಕಾರಣಗಳನ್ನು ಒದಗಿಸಿರುವುದಿಲ್ಲ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯ ಕಂಡು ಬರುವುದಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 14 ಪೊಸಿಅ 2008 ಬೆಂಗಳೂರು, ದಿ: 04ನೇ ಏಪ್ರಿಲ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಆರ್.ರೋಗಿ, ಸಿಪಿಸಿ–1827, ಕ್ಯಾಂಪ್ ಪೋಲೀಸ್ ಠಾಣೆ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 640

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೋಲೀಸ್ ಸೇವೆಗಳು)

**ವಿಷಯ:** ಶ್ರೀ.ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೋಲೀಸ್ ಸೂಪರಿಂಟೆಂಡೆಂಟ್, ಮಂಡ್ಯ ಜಿಲ್ಲೆ ಇವರ ಆದೇಶ ಸಂಖ್ಯೆ:ಸಿಬ್ಬಂದಿ(2)ಪಿಆರ್_1:2006-07 ದಿನಾಂಕ:31-05-2007.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೋಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ:ಅಪೀಲು 32/2007-08 ದಿನಾಂಕ:19-11-2007

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10-01-2008

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)129/2007-08 ದಿನಾಂಕ:01-03-2008

**ಪ್ರಸ್ತಾವನೆ:**

ಶ್ರೀ. ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ರ ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**-

ಶ್ರೀ.ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ ಸಂಚಾರಿ ಠಾಣೆ-2 (ಹಾಲಿ ಬಿಂಡಿಗನವಿಲೆ ಠಾಣೆ), ಇವರು ಕರ್ತವ್ಯ ನಿರ್ವಹಿಸುತ್ತಿದ್ದು, 09-02-2007 ರಂದು ಮಾನ್ಯ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೋಲೀಸ್, ಬೆಂಗಳೂರು ರವರು ಬೆಂಗಳೂರಿನಿಂದ ಮೈಸೂರಿಗೆ ಹೋಗುತ್ತಿರುವಾಗ ಇವರನ್ನು ಮಹಾವೀರ ವೃತ್ತದಿಂದ ಹೆಬ್ಬಾಳದವರೆಗೆ ಅವರ ಸುಗಮ ಸಂಚಾರದ ಜವಾಬ್ದಾರಿಯನ್ನು ಇವರಿಗೆ ವಹಿಸಲಾಗಿತ್ತು. ಇವರು ಗಣ್ಯರ ಸುಗಮ ಸಂಚಾರದ ಕರ್ತವ್ಯ ನಿರ್ವಹಿಸದೆ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತಾರೆ. ಅಲ್ಲದೆ ಇವರಿಗೆ ಕಂಟ್ರೋಲ್ ರೂಂನಿಂದ ಕರೆ ನೀಡಿದರೂ ಉತ್ತರಿಸದೆ ಕರ್ತವ್ಯದಲ್ಲಿ ಅತೀವ ಬೇಜವಬ್ದಾರಿತನ, ನಿರ್ಲಕ್ಷತನವನ್ನು ಹಾಗೂ ಅಶಿಸ್ತನ್ನು ಪ್ರದರ್ಶಿಸಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂಪೊಲೀಸ್ ಸೂಪರಿಂಟೆಂಡೆಂಟ್, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:31-05-2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಕಾಲ ನಂತರದ ವೇತನ ಬಡ್ತಿಗೆ ಯಾವುದೇ ಪರಿಣಾಮ ಬೀರದಂತೆ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:19-11-2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ದಿ:09-02-2007 ರಂದು ಮಾನ್ಯ ಡಿ.ಜಿ. & ಐ.ಜಿ.ಪಿ. ರವರು ಬೆಂಗಳೂರಿನಿಂದ ಮೈಸೂರಿಗೆ ಬರುತ್ತಿದ್ದ ಸಮಯದಲ್ಲಿ ಇವರನ್ನು ಸುಗಮ ಸಂಚಾರ ಕರ್ತವ್ಯ ನಿರ್ವಹಿಸಲು ನೇಮಕ ಮಾಡಲಾಗಿತ್ತು. ಸದರಿ ಕರ್ತವ್ಯವನ್ನು ನಿರ್ವಹಿಸದೇ ಗೈರು ಹಾಜರಾಗುವುದರ ಮೂಲಕ ಇವರು ಕರ್ತವ್ಯ ನಿರ್ಲಕ್ಷ್ಯತೆ ಹಾಗೂ ಅಶಿಸ್ತನ್ನು ಪ್ರದರ್ಶಿಸಿರುವುದು ದೃಢಪಟ್ಟಿರುತ್ತದೆ. ಇವರು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿ ಯಾಗಿದ್ದು, ಮೊಬೈಲ್ ಮತ್ತು ಲ್ಯಾಂಡ್ ಲೈನ್‌ಗಳನ್ನು ಸ್ವಿಚ್ ಆಫ್ ಮಾಡಿರುವುದಾಗಿ ಎಸ್.ಪಿ., ಮಂಡ್ಯ ರವರು ತಿಳಿಸಿರುತ್ತಾರೆ. ಇವರು ಶಿಸ್ತು ಪ್ರಾಧಿಕಾರದ ಆದೇಶವನ್ನು ಅಲ್ಲಗೆಳೆಯುವಂಥ ಯಾವುದೇ ಸಮರ್ಥನೀಯ ಕಾರಣಗಳನ್ನು ನೀಡಿರುವುದಿಲ್ಲ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 88 ಪೊಸಿಅ 2008 ಬೆಂಗಳೂರು, ದಿನಾಂಕ: 31ನೇ ಮಾರ್ಚ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 641

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಮಂಡ್ಯ ಜಿಲ್ಲೆ ಇವರ ಆದೇಶ ಸಂಖ್ಯೆ:ಸಿಬ್ಬಂದಿ(2)ಪಿಆರ್_2:2007-08, ದಿನಾಂಕ:31-05-2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ:ಅಪೀಲು 31/2007-08 ದಿನಾಂಕ:21-11-2007
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10-02-2008
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)128/2007-08, ದಿನಾಂಕ:01-03-2008

**ಪ್ರಸ್ತಾವನೆ:**

ಶ್ರೀ.ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ರ ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:-**

ಶ್ರೀ.ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ ಸಂಚಾರಿ ಠಾಣೆ-2 (ಹಾಲಿ ಬಿಂಡಿಗನವಿಲೆ ಠಾಣೆ), ಇವರು ಕರ್ತವ್ಯ ನಿರ್ವಹಿಸುತ್ತಿದ್ದು, 2007 ಜನವರಿ ಹಾಗೂ ಫೆಬ್ರವರಿ ತಿಂಗಳಲ್ಲಿ 67 ಹಾಗೂ 6 ಎಎಂವಿ ಪ್ರಕರಣ ಮಾತ್ರ ದಾಖಲು ಮಾಡಿರುತ್ತೀರಿ, ಇಷ್ಟು ಕಡಿಮೆ ವರದಿ ಮಾಡಿ ವಾಹನ ಕಾಯ್ದೆ ಉಲ್ಲಂಘನೆ ಮಾಡಿರುವವರ ಮೇಲೆ ಯಾವುದೇ ಕ್ರಮ ಕೈಗೊಳ್ಳದೆ ಇದ್ದರಿಂದ ರಸ್ತೆ ಅಪಘಾತ ಪ್ರಕರಣಗಳು ಹೆಚ್ಚಾಗಿ ನಡೆಯಲು ಅಸ್ಪದ ಉಂಟು ಮಾಡುವುದರ ಮೂಲಕ ಕರ್ತವ್ಯದಲ್ಲಿ ನಿರ್ಲಕ್ಷ್ಯತನವನ್ನು ಪ್ರದರ್ಶಿಸಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೋಲೀಸ್ ಸೂಪರಿಂಟೆಂಡೆಂಟ್, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:31-05-2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಕಾಲ ನಂತರದ ವೇತನ ಬಡ್ತಿಗೆ ಯಾವುದೇ ಪರಿಣಾಮ ಬೀರದಂತೆ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೋಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 21-11-2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ ಸಚ್ಚಿದಾನಂದ, ಪಿ.ಎಸ್.ಐ. ರವರು ಮಂಡ್ಯ ಸಂಚಾರಿ ಠಾಣೆ–2ರಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಜನವರಿ ಹಾಗೂ ಫೆಬ್ರವರಿ 2007ರಲ್ಲಿ ಕ್ರಮವಾಗಿ 67 ಹಾಗೂ 06 ಐ.ಎಂ.ವಿ. ಪ್ರಕರಣಗಳನ್ನು ಮಾತ್ರ ದಾಖಲು ಮಾಡಿರುತ್ತಾರೆ. ಇವರು ಕಡಿಮೆ ಪ್ರಕರಣ ವರದಿ ಮಾಡಿ ವಾಹನ ಕಾಯ್ದೆ ಉಲ್ಲಂಘನೆ ಮಾಡಿರುವವರ ಮೇಲೆ ಯಾವುದೇ ಕ್ರಮ ಕೈಗೊಳ್ಳದೆ ಇದ್ದುದರಿಂದ ರಸ್ತೆ ಅಪಘಾತ ಪ್ರಕರಣಗಳು ಹೆಚ್ಚಾಗಲು ಆಸ್ಪದ ಉಂಟು ಮಾಡುವುದರ ಮೂಲಕ ಕರ್ತವ್ಯ ನಿರ್ಲಕ್ಷ್ಯತೆ ಎಸಗಿರುವುದು ದೃಢಪಟ್ಟಿರುತ್ತದೆ. ಇವರು ಒಬ್ಬ ಜವಾಬ್ದಾರಿಯುತ ಪೋಲೀಸ್ ಅಧಿಕಾರಿಯಾಗಿದ್ದು, ಇವರು ಪರಿಣಾಮಕಾರಿಯಾಗಿ ಐ.ಎಂ.ವಿ. ಕಾಯ್ದೆ ಅಡಿಯಲ್ಲಿ ಪ್ರಕರಣ ದಾಖಲಿಸಿದ್ದಲ್ಲಿ ಅಪಘಾತಗಳು ಆಗುವ ಸಂಭವ ಕಡಿಮೆಯಾಗುತ್ತಿತ್ತು ಎಂದು ಎಸ್.ಪಿ. ಮಂಡ್ಯರವರು ತಿಳಿಸಿರುತ್ತಾರೆ. ಮೇಲಿನ ದೋಷಾರೋಪಣೆಗೆ ಎಸ್.ಪಿ. ಮಂಡ್ಯರವರು ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಕಾಲ ನಂತರದ ವೇತನ ಬಡ್ತಿಗೆ ಯಾವುದೇ ಪರಿಣಾಮ ಬೀರದಂತೆ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 89 ಪೊಸಿಅ 2008 ಬೆಂಗಳೂರು, ದಿನಾಂಕ: 31ನೇ ಮಾರ್ಚ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 638

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಎಂ.ಎಸ್.ಗೋವಿಂದರಾವ್, ಪಿಸಿ-7786, ವಿವಿಐಪಿ ಭದ್ರತೆ, ಬೆಂಗಳೂರು, ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ವಿವಿಐಪಿ ಭದ್ರತೆ, ಬೆಂಗಳೂರು ಇವರ ಆದೇಶ ಸಂಖ್ಯೆ:2/58/2005-06 ದಿನಾಂಕ:29-03-2006.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು/40/2006 ದಿನಾಂಕ:14-06-2007

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:12-12-2007

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ :ಅಪೀಲು(2)86/2007-08 , ದಿನಾಂಕ:26-02-2008

**ಪ್ರಸ್ತಾವನೆ:**

ಶ್ರೀ.ಎಂ.ಎಸ್.ಗೋವಿಂದರಾವ್, ಪಿಸಿ-7786, ವಿವಿಐಪಿ ಭದ್ರತೆ, ಬೆಂಗಳೂರು, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ರ ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:-**

ಶ್ರೀ.ಎಂ.ಎಸ್.ಗೋವಿಂದರಾವ್, ಪಿಸಿ-7786, ವಿವಿಐಪಿ ಭದ್ರತೆ, ಬೆಂಗಳೂರು, ದಿ: 10-11-2005 ಮತ್ತು 11-11-2005 ರಂದು ಚೆಕ್ ಗಣರಾಜ್ಯದ ಅಧ್ಯಕ್ಷರು ಬೆಂಗಳೂರು ನಗರಕ್ಕೆ ಭೇಟಿ ಕೊಡುವ ಕಾರ್ಯಕ್ರಮ ಇದ್ದುದರಿಂದ ನಿಮ್ಮನ್ನು

ವಿಮಾನ ನಿಲ್ದಾಣದಲ್ಲಿ ಡಿ.ಎಫ್.ಎಂ.ಡಿ. ಅಳವಡಿಸಿ ವಿಶೇಷ ಕರ್ತವ್ಯ ನಿರ್ವಹಿಸಲು ನೇಮಿಸಲಾಗಿತ್ತು ಆದರೆ ನೀವು ಯಾವುದೇ ರೀತಿಯ ಮಾಹಿತಿಯನ್ನು ನೀಡದೆ ಅತಿಗಣ್ಯವ್ಯಕ್ತಿಗಳ ಭದ್ರತೆಗಾಗಿ ನೇಮಿಸಿದ್ದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜ ರಾಗದೆ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನವನ್ನು ತೋರಿಸಿರುತ್ತೀರಿ. ಗಣ್ಯವ್ಯಕ್ತಿಗಳ ಕರ್ತವ್ಯಕ್ಕೆ ಹಾಜರಾಗುವುದು ಅತಿ ಪ್ರಮುಖವಾದ ವಿಷಯವಾಗಿರುತ್ತದೆ. ರಾಷ್ಟ್ರದ ಹಿತದೃಷ್ಟಿಯಿಂದಲೂ ಸಹ ಹೊರನಾಡಿನಿಂದ ಬರುವ ಗಣ್ಯವ್ಯಕ್ತಿಗಳಿಗೆ ಭದ್ರತೆಯನ್ನು ಒದಗಿಸುವುದು ಮಹತ್ವದಾಗಿರುತ್ತದೆ. ವಿಷಯವು ಇಷ್ಟೊಂದು ಗಂಭೀರ ಸ್ವರೂಪದ್ದಾಗಿದ್ದರೂ ಸಹ ನೀವು ಡಿ.ಎಫ್.ಎಂ.ಡಿ. ಉಪಕರಣವನ್ನು ಅಳವಡಿಸದೇ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗಿ ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನವನ್ನು ತೋರಿರುತ್ತೀರಿ ಎಂಬ ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ವಿವಿಐಪಿ ಭದ್ರತೆ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:29-03-2006ರ ಆದೇಶದಲ್ಲಿ ಅರ್ಜಿದಾರರು ಮಾಜಿ ಪ್ರಧಾನ ಮಂತ್ರಿಗಳ ಕುಟುಂಬದ ಭದ್ರತೆ, ಬೆಂಗಳೂರು ನಗರ, ರವರು ಗೈರುಹಾಜರಾದ ದಿನವನ್ನು CLಗೆ ಮಾರ್ಪಡಿಸಿ, ಮೇಲೆ ತಿಳಿಸಿದ ದುರ್ನಡತೆ ಮತ್ತು ನಿರ್ಲಕ್ಷ್ಯ ಹಾಗೂ ಬೇಜವಾಬ್ದಾರಿಗೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಒಂದು ವರ್ಷಕಾಲ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:14-06-2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ.ಎಂ.ಎಸ್.ಗೋವಿಂದರಾವ್, ಪಿಸಿ-7786, ವಿವಿಐಪಿ ಭದ್ರತೆ, ಬೆಂಗಳೂರು, ರವರು ದಿ:10-11-2005 ಮತ್ತು 11-11-2005 ರಂದು ಚೆಕ್ ಗಣ ರಾಜ್ಯದ ಅಧ್ಯಕ್ಷರು ಬೆಂಗಳೂರು ನಗರಕ್ಕೆ ಬೇಟಿ ಕೊಡುವ ಸಂದರ್ಭದಲ್ಲಿ ಡಿ.ಎಫ್.ಎಂ.ಡಿ ಉಪಕರಣವನ್ನು ಅಳವಡಿಸದೆ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತಾರೆ. ಅಲ್ಲದೆ, ಹಾಜರಾತಿ ಪುಸ್ತಕದಲ್ಲಿ `A` ಎಂದು mark ಮಾಡಿದ್ದು, ಅದನ್ನು ಹೊಡೆದು ಹಾಕಿ ಸಹಿ ಮಾಡಿರುತ್ತಾರೆ. ಇವರು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ಗೈರು ಹಾಜರಾಗಿ ನಂತರ ಸಹಿ ಮಾಡಿರುವುದು ಗಂಭೀರವಾದ ದುರ್ನಡತೆಯಾಗಿರುತ್ತದೆ. ಈ ಬಗ್ಗೆ ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಸಕಾರಣಗಳನ್ನು ನೀಡಿರುವುದಿಲ್ಲ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 77 ಪೊಸಿಅ 2008 ಬೆಂಗಳೂರು, ದಿನಾಂಕ: 4ನೇ ಏಪ್ರಿಲ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಎಂ.ಎಸ್.ಗೋವಿಂದರಾವ್, ಪಿಸಿ-7786, ವಿವಿಐಪಿ ಭದ್ರತೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 643

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ**: ಶ್ರೀ ವಿ.ಎಸ್.ಸರ್ವೆ, ಹೆಚ್‌ಸಿ–80, 1ನೇ ಪಡೆ, ಕೆ.ಎಸ್.ಆರ್.ಪಿ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ**: 1) ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ: ಡಿಇ/01/2005–06 ದಿನಾಂಕ: 05–09–2006.

2) ಮೇಲ್ಮನವಿ ಪ್ರಾಧಿಕಾರಿಗಳಿಗೆ ಮೇಲ್ಮನವಿ ಸಲ್ಲಿಸಿರುವುದಿಲ್ಲ.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:09–10–2007.

4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/93/2007–08, ದಿನಾಂಕ: 11–12–2007.

**ಪ್ರಸ್ತಾವನೆ:**

ಶ್ರೀ ವಿ.ಎಸ್.ಸರ್ವೆ, ಹೆಚ್‌ಸಿ–80, 1ನೇ ಪಡೆ, ಕೆ.ಎಸ್.ಆರ್.ಪಿ, ಬೆಂಗಳೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

ವಿ.ಎಸ್.ಸರ್ವೆ, ಹೆಚ್.ಸಿ–80, 1ನೇ ಪಡೆ, ಕೆ.ಎಸ್.ಆರ್.ಪಿ, ಬೆಂಗಳೂರು (ಹಿಂದೆ ಹವಲ್ದಾರ್ ಚಾಲಕ–169, 6ನೇ ಪಡೆ, ಕೆ.ಎಸ್.ಆರ್.ಪಿ, ಗುಲ್ಬರ್ಗ) ರವರು ದಿನಾಂಕ:26–02–2005 ರಂದು ಸಮಯ ಸುಮಾರು 9.00 ಗಂಟೆಗೆ ಎರಡನೇ ಹಂತದ ಗ್ರಾಮ ಪಂಚಾಯತ್ ಚುನಾವಣೆ ಬಂದೊಬಸ್ತ್ ಕರ್ತವ್ಯ ಸಲುವಾಗಿ ಪೊಲೀಸ್ ಕಂಟ್ರೋಲ್ ರೂಮ್, ಬೀದರ್ ರವರಲ್ಲಿ ವರದಿ ಮಾಡಿಕೊಂಡಿದ್ದು, ಸದರಿ ಕಂಟ್ರೋಲ್ ರೂಮ್ ಅಧಿಕಾರಿಗಳು ಪಕ್ಕದಲ್ಲಿಯೇ ಇರುವ ಪೊಲೀಸ್ ಕಲ್ಯಾಣ ಮಂಟಪದಲ್ಲಿ ರಾತ್ರಿ ವಿಶ್ರಮಿಸಿ ಮುಂಜಾನೆ 8.00 ಗಂಟೆಗೆ ಪುನ: ಕಂಟ್ರೋಲ್ ರೂಮ್‌ಗೆ ಬರುವಂತೆ ನಿಮ್ಮ ತುಕಡಿ ನಾಯಕರಿಗೆ ನಿರ್ದೇಶನ ನೀಡಿದ್ದು ಸದರಿ ಆದೇಶವನ್ನು ನಿಮ್ಮ, ತುಕಡಿ ನಾಯಕರು ನಿಮ್ಮನ್ನೊಳಗೊಂಡು ತುಕಡಿಯ ಎಲ್ಲಾ ಸಿಬ್ಬಂದಿಯವರಿಗೆ ತಿಳಿಸಿದ ಮೇಲೂ ನೀವು ನಿಮ್ಮ ಅಧಿಕಾರಿಗಳ ಆದೇಶವನ್ನು ಧಿಕ್ಕರಿಸಿ ಸ್ವಂತ ನಿರ್ಧಾರದ ಮೇಲೆ ನಿಮ್ಮ ವಾಹನದಲ್ಲಿಯ ನಿಸ್ತಂತು ಮೂಲಕ ನಾವು ಕೆ.ಎಸ್.ಆರ್.ಪಿ, ಕ್ಯಾಂಪ್ ನೌಬಾದ್‌ನಲ್ಲಿ ಮಲಗಿ ಮುಂಜಾನೆ 8.00 ಗಂಟೆಗೆ ಬರುವುದಾಗಿ ಕಂಟ್ರೋಲ್ ರೂಮ್ ಆಧಿಕಾರಿಗಳಿಗೆ ತಿಳಿಸಿ ಹಾಗೂ ದಿನಾಂಕ: 26–02–2005 ರಂದು ಸಮಯ 2.00 ಗಂಟೆಗೆ ನಿಮ್ಮ ಮೇಲಾಧಿಕಾರಿಗಳ ಆದೇಶ ಧಿಕ್ಕರಿಸಿ ನಿಮ್ಮ ವಿವೇಚನೆ ಮೇರೆಗೆ ವಾಹನ ಸಂಖ್ಯೆ: ಕೆಎ.27.ಜಿ.4018ನ್ನು ತೆಗೆದುಕೊಂಡು ನೀವು ಮದ್ಯಪಾನ ಮಾಡಿದ ಸ್ಥಿತಿಯಲ್ಲಿ ವಾಹನವನ್ನು ಅಜಾಗರೂಕತೆ, ಅತೀವೇಗದಿಂದ ನಡೆಸಿ ಕೆ.ಎಸ್.ಆರ್.ಪಿ ನೌಬಾದ್ ಕ್ಯಾಂಪ್ ಹೋಗುವ ಮಾರ್ಗ ಮಧ್ಯದಲ್ಲಿ ಪಾಪನಾಶ ಹತ್ತಿರ ತಿರುವು ರಸ್ತೆಯಲ್ಲಿಯ ಬ್ರಿಜ್ ಕಟ್ಟೆಗೆ ಡಿಕ್ಕಿ ಹೊಡೆದ ಪರಿಣಾಮ ವಾಹನ ಉರುಳಿ ಬಿದ್ದು, ವಾಹನದಲ್ಲಿದ್ದ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರಿಗೆ ಗಾಯಗಳುಂಟಾಗಲು ಮತ್ತು ಸರ್ಕಾರಿ ವಾಹನಕ್ಕೆ ಬಹಳಷ್ಟು ನಷ್ಟ ಉಂಟಾಗಲು ಕಾರಣರಾಗಿರುತ್ತೀರಿ.

ಈ ನಿಮ್ಮ ದುರ್ನಡತೆಯ ಬಗ್ಗೆ ಸಂಚಾರಿ ಪೊಲೀಸ್ ಠಾಣೆ, ಬೀದರ್‌ನಲ್ಲಿ ಅಪರಾಧ ಸಂಖ್ಯೆ:90/2005 ಕಲಂ 279,337 ಐ.ಪಿ.ಸಿ ಪ್ರಕಾರ ನಿಮ್ಮ ವಿರುದ್ಧ ಗುನ್ನೆ ದಾಖಲಾಗಿರುತ್ತದೆ. ನೀವು ಕರ್ತವ್ಯದಲ್ಲಿ ಬೇಜವಾಬ್ದಾರಿ, ದುರ್ನಡತೆ, ಅಶಿಸ್ತು, ಉದ್ಧಟತನ ವರ್ತನೆ, ಮೇಲಾಧಿಕಾರಿಗಳ ಆಜ್ಞೆ ಉಲ್ಲಂಘಿಸಿ ಘೋರ ಅಪರಾಧ ಪ್ರದರ್ಶಿರುವಿರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಸಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:05–09–2006ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಹವಲ್ದಾರ್ ಹುದ್ದೆಯ ಕನಿಷ್ಟ ಮೂರು ವರ್ಷಗಳ ಕಾಲ ಮುಂದಿನ ವಾರ್ಷಿಕ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ನಿಗದಿಪಡಿಸಿ ಮತ್ತು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಮೇಲ್ಮನವಿಯನ್ನು ಮೇಲ್ಮನವಿ ಪ್ರಾಧಿಕಾರಿಗಳಿಗೆ ಸಲ್ಲಿಸಿರುವುದಿಲ್ಲ.

ಈ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧ ಹೊರಿಸಲಾದ ಆರೋಪಗಳು ಸಾಬೀತಾಗಿದ್ದು, ಇದನ್ನು ಪುನರ್ ಪರಿಶೀಲಿಸಲು ಯಾವುದೇ ದೃಢಪಡುವ ಅಂಶಗಳಿಲ್ಲದಿರುವುದರಿಂದ ಅರ್ಜಿದಾರರು ದಿನಾಂಕ:26–02–2005 ರಂದು ರಾತ್ರಿ 2 ಗಂಟೆ ಸಮಯದಲ್ಲಿ ಬೀದರ್ ಜಿಲ್ಲಾ ಪೊಲೀಸ್ ಕಂಟ್ರೋಲ್ ರೂಮ್ ಆದೇಶದಂತೆ ಕಲ್ಯಾಣ ಮಂಟಪದಲ್ಲಿ ವಿಶ್ರಮಿಸಿ ಮುಂಜಾನೆ 8 ಗಂಟೆಗೆ ಕಂಟ್ರೋಲ್ ರೂಮ್‌ಗೆ ಬರುವಂತೆ ನಿರ್ದೇಶನ ನೀಡಿರುವುದು ಕಂಡು ಬರುತ್ತದೆ. ಆದರೆ ಸದರಿ ಕಲ್ಯಾಣ ಮಂಟಪದಲ್ಲಿ ನೀರಿನ ಮತ್ತು ಶೌಚಾಲಯ ವ್ಯವಸ್ಥೆ ಇಲ್ಲದಿರುವುದರಿಂದ ಈ ವಿಷಯವನ್ನು ಕಂಟ್ರೋಲ್ ರೂಮ್‌ಗೆ ನಿಸ್ತಂತು ಮೂಲಕ ತಿಳಿಸಿ ವಾಹನವನ್ನು ಕೆ.ಎಸ್.ಆರ್.ಪಿ ಕಾಂಪೌಂಡ್ ಕಡೆಗೆ ತೆಗೆದುಕೊಂಡು ಹೋಗಿರುತ್ತಾರೆ. ಅರ್ಜಿದಾರರು ವಾಹನ ಚಾಲಕರಾಗಿದ್ದು, ಉಳಿದ ಸಿಬ್ಬಂದಿಯ ವಿರುದ್ಧ ಕ್ರಮ ಜರುಗಿಸಿದ ಬಗ್ಗೆ ಮಾಹಿತಿ ಇರುವುದಿಲ್ಲ. ವಾಹನವನ್ನು ತೆಗೆದುಕೊಂಡು ಹೋಗುವಾಗ ಮಧ್ಯಪಾನ ಮಾಡಿರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ. ಇಲಾಖಾ ವಿಚಾರಣೆ ಮತ್ತು ನ್ಯಾಯಾಲಯದ ವಿಚಾರಣೆಗಳು ಭಿನ್ನವಾಗಿದ್ದು, ನ್ಯಾಯಾಲಯದಲ್ಲಿ ಸಾಕ್ಷಿಗಳ ಕೊರತೆಯಿಂದ ಆಪಾದಿತರು ಬಿಡುಗಡೆಯಾಗಿರುವುದು ಕಂಡು ಬರುತ್ತದೆ. ಇಲಾಖಾ ವಿಚಾರಣೆಯಲ್ಲಿ ದೋಷಾರೋಪಣೆಗಳು ಸಾಬೀತಾಗಿರುವುದರಿಂದ ಅವರಿಗೆ ಸೂಕ್ತ ಶಿಕ್ಷೆ ವಿಧಿಸಲಾಗಿದೆ. ನ್ಯಾಯಾಲಯದ ತೀರ್ಪು ಮತ್ತು ಇಲಾಖಾ ವಿಚಾರಣೆಗಳ ತೀರ್ಪು ಒಂದೇ

ಆಗಿರಬೇಕೆಂದು ಕಡ್ಡಾಯವಿರುವುದಿಲ್ಲ. ಮಧ್ಯಪಾನ ಮಾಡಿ ವಾಹನ ಚಲಿಸಿರುವುದು ಸಾಬೀತಾಗಿದ್ದು. ಅವರಿಗೆ ವಿಧಿಸಿದ ಶಿಕ್ಷೆಯು ಸೂಕ್ತವಾಗಿರುತ್ತದೆ. ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಬೇಜವಾಬ್ದಾರಿತನ, ನಿರ್ಲಕ್ಷತೆ ಪ್ರದರ್ಶಿಸಿರುವುದು ಸ್ಪಷ್ಟವಾಗಿರುತ್ತದೆ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯ ಕಂಡು ಬರುವುದಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 06 ಪೊಸಿಅ 2008, ಬೆಂಗಳೂರು ದಿ: 31ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ.ಎಸ್.ಸರ್ವೆ, ಹೆಚ್‌ಸಿ–80, 1ನೇ ಪಡೆ, ಕೆ.ಎಸ್.ಆರ್.ಪಿ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 206

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ತಿರುಮಲಯ್ಯ ಬಿ.ವಿ. ಎ.ಎಚ್.ಸಿ.-8, ಡಿ.ಎ.ಆರ್., ಮಂಡ್ಯ ಜಿಲ್ಲೆ ಅವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ(2)ಡಿಇ:16:03-04, ದಿನಾಂಕ:13-12-2004
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ದಕ್ಷಿಣ ವಲಯ ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು:7: 2004-05, ದಿನಾಂಕ:04-07-2005
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:20-03-2006
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)51/2006, ದಿನಾಂಕ:17-11-2007

**ಪ್ರಸ್ತಾವನೆ:**

ಶ್ರೀ ತಿರುಮಲಯ್ಯ ಬಿ.ವಿ. ಎ.ಎಚ್.ಸಿ.-8, ಡಿ.ಎ.ಆರ್., ಮಂಡ್ಯ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ತಿರುಮಲಯ್ಯ ಬಿ.ವಿ. ಎ.ಹೆಚ್.ಸಿ.-8, ಜಿಲ್ಲಾ ಪೊಲೀಸ್ ಸಶಸ್ತ್ರ ಮೀಸಲು ಪಡೆಯ ಅರ್ಮರಿ ವಿಭಾಗ, ಮಂಡ್ಯದಲ್ಲಿ ನೀವು ಕರ್ತವ್ಯ ನಿರ್ವಹಿಸುತ್ತಿದ್ದು, 1994 ರಲ್ಲಿ ಬೆಸಗರಹಳ್ಳಿ ಪೊಲೀಸ್ ಠಾಣೆಯಿಂದ ಎಂಟು 303 ರೈಫಲ್‌ಗಳನ್ನು ಹಿಂದಕ್ಕೆ ಪಡೆದಿದ್ದು, 800 ಗುಂಡುಗಳನ್ನು ಪಡೆದಿರುವುದಿಲ್ಲ. ಅಲ್ಲದೆ ಸದರಿ ಠಾಣೆಯಲ್ಲಿ ಅಭ್ಯಾಸದಲ್ಲಿ ಬಳಸಿದ್ದ 390 ಖಾಲಿ ಕೊಳವೆಗಳನ್ನು ಹಿಂದಕ್ಕೆ ಪಡೆದಿದ್ದು, ಅವುಗಳ ಬದಲಿಗೆ ಗುಂಡುಗಳನ್ನು ನೀಡಿಲ್ಲ. ಹಾಗೂ ಸಂಬಂಧಪಟ್ಟ ರಿಜಿಸ್ಟ್ರಾರ್‌ನಲ್ಲಿ ನಮೂದಿಸಿರುವುದಿಲ್ಲ. ಹಾಗೂ ಸದರಿ ಠಾಣೆಯ ಸಿಬ್ಬಂದಿಯವರ 390 ಕೊಳವೆಗಳನ್ನು ವಾಪಸ್ಸು ನೀಡಿಯೇ ಇಲ್ಲ ಎಂದು ವಾದಿಸಿ ಅನಂತರ ಒಪ್ಪಿಕೊಂಡಿರುತ್ತೀರಿ. ದಿನಾಂಕ:27-12-2001 ರಂದು ಸದರಿ ಠಾಣೆಯ ಸಿಬ್ಬಂದಿಯವರ ಗುರಿ ಅಭ್ಯಾಸದಲ್ಲಿ ಉಪಯೋಗಿಸಿದ್ದು, ಖಾಲಿ ಕೊಳವೆ 500 ಹಾಗೂ ಮಿಸ್‌ಫೈರ್ ಆದ ಕೊಳವೆ ಗಳನ್ನು ದಿನಾಂಕ:01-01-2002 ರಂದು ಪಡೆದು ಸ್ವೀಕೃತಿ ನೀಡಿದ್ದು, ಬದಲಿ ಗುಂಡು ನೀಡಿರುವುದಿಲ್ಲ. ವಾರ್ಷಿಕ ತಪಾಸಣೆಯ ಸಮಯದಲ್ಲಿ ನ್ಯೂನತೆಗಳನ್ನು ಸರಿಪಡಿಸದೆ ಲೆಕ್ಕಕ್ಕೂ ತೆಗೆದುಕೊಳ್ಳದೆ ಸುಳ್ಳು ಮಾಹಿತಿ ನೀಡಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:13-12-2004ರ ಆದೇಶದಲ್ಲಿ ಅರ್ಜಿದಾರರಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷದ ಕಾಲ ಅನಂತರದ ವೇತನ ಬಡ್ತಿಗೆ ಸಂಚಿತ ಪರಿಣಾಮ ಬೀರುವಂತೆ ಮುಂದೂಡಿದ ಹಾಗೂ ಇವರು ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ:22-11-2003 ರಿಂದ ದಿನಾಂಕ:03-01-2004ರ ವರಗೆ ಅಮಾನತ್ತು ಎಂದು ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್

ಮಹಾ ನಿರೀಕ್ಷಕರು ದಕ್ಷಿಣ ವಲಯ ಮೈಸೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:**04-07-2005**ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧ ಹೊರಿಸಲಾದ ಆರೋಪಗಳು ವಿಚಾರಣೆ ಸಮಯದಲ್ಲಿ ಸಾಬೀತಾಗಿದ್ದು ಹಾಗೂ ಗಂಭೀರ ಸ್ವರೂಪದಾಗಿದ್ದು, ಇವರ ದೀರ್ಘ ಸೇವೆಯನ್ನು ಪರಿಗಣಿಸಿ ಶಿಸ್ತು ಪ್ರಾಧಿಕಾರಿಯು ಕಡಿಮೆ ಪ್ರಮಾಣದ ಶಿಕ್ಷೆ ವಿಧಿಸಿರುತ್ತಾರೆ. ಇದನ್ನು ಮತ್ತೆ ಕಡಿಮೆ ಮಾಡಲು, ಯಾವುದೇ ಸಮರ್ಥ ದಾಖಲೆಗಳಾಗಲಿ ಅಥವಾ ಸಾಕ್ಷಿಗಳಾಗಲಿ ಇರುವುದಿಲ್ಲ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 422 ಪೊಸಿಅ 2006 ಬೆಂಗಳೂರು, ದಿನಾಂಕ: 17ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ತಿರುಮಲಯ್ಯ ಬಿ.ವಿ. ಎ.ಎಚ್.ಸಿ.-**8**, ಡಿ.ಎ.ಆರ್., ಮಂಡ್ಯ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 161

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ**: ಶ್ರೀ ಟಿ.ವಸಂತ ಕುಮಾರ್, ಎಪಿಸಿ 1870,ಸಿಎಆರ್(ದಕ್ಷಿಣ),ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ**:

1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು, ನಗರ ಸಶಸ್ತ್ರ ಮೀಸಲು ಪಡೆ, ದಕ್ಷಿಣ, ಬೆಂಗಳೂರು,ಇವರ ಆದೇಶ ಸಂಖ್ಯೆ: ಡಿಇ/3/ಆರ್–6/06–07 ದಿನಾಂಕ: 26–09–2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್, ಸಿ.ಎ.ಆರ್, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: ಅಪೀಲು (29)/2/2006 ದಿನಾಂಕ: 15–03–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:04–07–2007.
4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)44/2007–08, ದಿನಾಂಕ: 17–11–2007.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ PSC 227 CNS 2007 dated: 30–01–2008.

**ಪ್ರಸ್ತಾವನೆ:**

ಶ್ರೀ ಟಿ.ವಸಂತ ಕುಮಾರ್, ಎಪಿಸಿ 1870, ಸಿಎಆರ್(ದಕ್ಷಿಣ), ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

1) ಶ್ರೀ ಟಿ.ವಸಂತ ಕುಮಾರ್, ಎಪಿಸಿ 1870,ಸಿಎಆರ್(ದಕ್ಷಿಣ),ಬೆಂಗಳೂರು ರವರು 'ಐ' ಪಂಗಡದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ದಿನಾಂಕ:28–04–2006 ರಿಂದ 03–07–2006 ರವರೆಗೆ 67 ದಿನಗಳು ಯಾವುದೇ ಪೂರ್ವಾನುಮತಿ ಪಡೆಯದೆ, ಮುನ್ಸೂಚನೆಯ ಕಾರಣ ನೀಡದೆ ಏಕಾ ಏಕೀ ಶ್ರೀ ಗಾವಂಕರ್, ಮಾನ್ಯ ಐಜಿಪಿ ರವರ ಗೃಹಪರಿಚಾರಕ ಕರ್ತವ್ಯದಿಂದ ಅನಧಿಕೃತವಾಗಿ ಗೈರುಹಾಜರು ಆಗಿದ್ದು ಹಾಗೂ ಸೇವಾವಧಿಯಲ್ಲಿ ಶಿಕ್ಷಾ ಪಟ್ಟಿಯ ಪ್ರಕಾರ 12 ಬಾರಿ ಒಟ್ಟು 553 ದಿನಗಳು ಕರ್ತವ್ಯಕ್ಕೆ ಪದೇ ಪದೇ ಗೈರುಹಾಜರಾಗುವ ಹವ್ಯಾಸ ಬೆಳೆಸಿಕೊಂಡಿರುವುದು ಸರ್ಕಾರಿ ಕರ್ತವ್ಯದಲ್ಲಿ ಬೇಜವಾಬ್ದಾರಿ, ನಿರ್ಲಕ್ಷತೆ, ಅಶಿಸ್ತು ಉಧಾಸೀನತೆ ಪ್ರದರ್ಶಿಸಿರುವುದಾಗಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು, ನಗರ ಮೀಸಲು ಪಡೆ, ದಕ್ಷಿಣ, ಬೆಂಗಳೂರು ರವರು ಆ.ಪೊ.ಅ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಲಾಗಿದೆ ಹಾಗೂ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಿ ಅವಧಿ ದಿನಾಂಕ:28–04–2006 ರಿಂದ 03–07–06 ರವರೆಗೆ ಕೆ.ಸಿ.ಎಸ್.ಆರ್ ನಿಯಮ 106(ಎ) ರೀತ್ಯಾ ವೇತನ ರಹಿತ ರಜೆ ಎಂದು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 26–09–06 ರಲ್ಲಿ ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿ ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್, ಸಿ.ಎ.ಆರ್, ಬೆಂಗಳೂರು ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 15–03–2007 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿ ಪರಿಶೀಲಿಸಲಾಗಿ, ಆ.ಪೊ.ಅ ಇವರು ಗೈರು ಹಾಜರಾದ ಅವಧಿಯು 4 ತಿಂಗಳಿಗಿಂತ ಕಡಿಮೆ ಇರುವುದರಿಂದ ಶಿಸ್ತು ಪ್ರಾಧಿಕಾರದ ಆದೇಶವನ್ನು ಭಾಗಶ: ಮಾರ್ಪಡಿಸಿ ಸದರಿಯವರನ್ನು ಸೇವೆಗೆ ಪುನರ್ ನೇಮಕ ಮಾಡಿ ಇವರ 3 ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಮಾಡಿ ಬಡ್ತಿಗಳಿಗೆ ಧಕ್ಕೆ ಆಗುವಂತೆ (with cumulative effect) ಮುಂದೂಡುವ ಶಿಕ್ಷೆ ವಿಧಿಸಲು ಸರ್ಕಾರ ನಿರ್ಧರಿಸಿದೆ, ಇದನ್ನು ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿನಾಂಕ:30–01–2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 352 ಪೊಸಿಅ 2007 ಬೆಂಗಳೂರು, ದಿ: 19ನೇ ಫೆಬ್ರವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನೆಯನ್ನು ಬಾಗಶ: ಮಾರ್ಪಡಿಸಿ ಶ್ರೀ ಟಿ.ವಸಂತ ಕುಮಾರ್, ಎಪಿಸಿ 1870, ಸಿಎಆರ್(ದಕ್ಷಿಣ), ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಇವರನ್ನು ಸೇವೆಗೆ ಪುನರ್ ನೇಮಕ ಮಾಡಿ ಇವರ 3 ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ಬಡ್ತಿಗಳಿಗೆ ಧಕ್ಕೆಯಾಗುವಂತೆ (with cumulative effect) ಮುಂದೂಡುವ ಹಾಗೂ ಗೈರು ಹಾಜರಾದ ಅವಧಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಿದೆ ಎಂದು ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 227 ಸಿಎನ್‌ಎಸ್ 2007 ದಿನಾಂಕ: 30–01–2008 ರನ್ವಯ ಹೊರಡಿಸಲಾಗಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 414

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ**: ಶ್ರೀ ಸುರೇಶ್, ಪಿಸಿ–403, ಸುಲೆಪೇಟೆ ಪೊಲೀಸ್ ಠಾಣೆ, ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ**: 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಉಪ ಅಧೀಕ್ಷಕರು, ಶಾಹಾಬಾದ್ ಇವರ ಆದೇಶ ಸಂಖ್ಯೆ: ಪಿಆರ್/82/ಶಉವಿ/05, ದಿನಾಂಕ: 22–02–2006.

2) ಮೇಲ್ಮನವಿ ಪ್ರಾಧಿಕಾರಿ ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು/52/ಈವ/2007 ದಿನಾಂಕ:11–05–2007.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:16–08–2007.

4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/67/2007–08, ದಿನಾಂಕ: 07–01–2008.

**ಪ್ರಸ್ತಾವನೆ:**

ಶ್ರೀ ಸುರೇಶ್, ಪಿಸಿ–403, ಸುಲೆಪೇಟೆ ಪೊಲೀಸ್ ಠಾಣೆ, ಗುಲ್ಬರ್ಗಾ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

ಶ್ರೀ ಸುರೇಶ್, ಪಿಸಿ–403, ಸುಲೆಪೇಟೆ ಪೊಲೀಸ್ ಠಾಣೆ, ಗುಲ್ಬರ್ಗಾ ರವರು ದಿನಾಂಕ 08–09–2005 ರಂದು ಹಿರಿಯ ಅಧಿಕಾರಿಗಳ ಆದೇಶದನುಸಾರ ಗ್ರಾಮಗಸ್ತು ನಂ.4 ರಲ್ಲಿ ರಾತ್ರಿ ಕಲ್ಲಗುರ್ತಿ ಗ್ರಾಮದಲ್ಲಿ ಕರ್ತವ್ಯದಲ್ಲಿ ಉಪೇಕ್ಷತನ ತೋರಿಸಿದ್ದು ಅಲ್ಲದೆ, ಪಿಎಸ್‌ಐ ಕಾಳಗಿ ಠಾಣೆ ರವರೊಂದಿಗೆ ಅಸಭ್ಯ ರೀತಿಯಿಂದ ನಡೆದು ಕೊಂಡು ಕರ್ತವ್ಯದಲ್ಲಿ ಅಶಿಸ್ತು ಪ್ರದರ್ಶಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಆ.ಪೊ.ಅ ರವರ ವಿವರಣೆ ತೃಪ್ತಿಕರವಾಗಿರುವುದಿಲ್ಲದ ಕಾರಣ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಉಪ ಅಧೀಕ್ಷಕರು, ಶಹಬಾದ್ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ

ಓದಲಾದ ದಿನಾಂಕ:22–02–2006ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಮುಂಬಡ್ತಿಯನ್ನು ಒಂದು ವರ್ಷಕಾಲ ಮುಂದಿನ ವಾರ್ಷಿಕ ವೇತನ ಮುಂಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿ ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿದಾರರ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಅರ್ಜಿದಾರರು ಜಿಲ್ಲಾ ಪೊಲೀಸ್ ಕಛೇರಿಗೆ ಸಲ್ಲಿಸಿದ ಮೇಲ್ಮನವಿಯು ತಿರಸ್ಕರಿಸಿರುವುದರಿಂದ ಪರಿಗಣಿಸುವಂತಹ ಯಾವುದೇ ಅಂಶಗಳು ಕಂಡುಬಾರದೇ ಇರುವುದರಿಂದ ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:11–05–2007 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿ, ಶ್ರೀ ಸುರೇಶ್, ಸಿಪಿಸಿ ರವರು ತಾವು ಮಳೆ ಇತ್ಯಾದಿ ಕಾರಣಗಳಿಂದ ಕಲ್ಲಗುರ್ತಿ ಗ್ರಾಮದಲ್ಲಿ ವಾಸ್ತವ್ಯ ಹೂಡಲು ಆಗಿರುವುದಿಲ್ಲವೆಂದು ಮೇಲ್ಮನವಿಯಲ್ಲಿ ಒಪ್ಪಿಕೊಂಡು ವಿವರಣೆ ನೀಡಿರುತ್ತಾರೆಂದು ಪೊಲೀಸ್ ಉಪ ಅಧೀಕ್ಷಕರು ವರದಿ ಮಾಡಿರುತ್ತಾರೆ. ತಾವು ಹಿರಿಯ ಅಧಿಕಾರಿಗಳೊಂದಿಗೆ ಅಸಭ್ಯವಾಗಿ ನಡೆದುಕೊಂಡಿದ್ದು, ಇವರಿಗೆ ಶಿಸ್ತು ಪ್ರಾಧಿಕಾರವು ಅವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲ ಮುಂದಿನ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡುವ ಶಿಕ್ಷೆ ವಿಧಿಸಲಾಗಿದೆ. ಅರ್ಜಿದಾರರು ಆ ದಿವಸ ಕಲ್ಲಗುರ್ತಿ ಗ್ರಾಮದಲ್ಲಿ ವಾಸ್ತವ್ಯ ಮಾಡದಿರುವುದು ಸಾಬೀತಾಗಿರುವುದರಿಂದ ಶಿಸ್ತು ಪ್ರಾಧಿಕಾರ ವಿಧಿಸಿದ ಶಿಕ್ಷೆಯು ಸೂಕ್ತವಾಗಿದ್ದು, ಇದರಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯ ಕಂಡು ಬರುವುದಿಲ್ಲ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯ ಕಂಡು ಬರುವುದಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 43 ಪೊಸಿಅ 2008 ಬೆಂಗಳೂರು, ದಿ: 01ನೇ ಮಾರ್ಚ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸುರೇಶ್, ಪಿಸಿ–403, ಸುಲೆಪೇಟೆ ಪೊಲೀಸ್ ಠಾಣೆ, ಗುಲ್ಬರ್ಗಾ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 416

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಶೇಖ್ ಹುಸೇನ್, ಎಹೆಚ್‌ಸಿ–19, ಡಿಎಆರ್, ರಾಯಚೂರು ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧಿಕಾರಿ, ರಾಯಚೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಲೆಕ್ಕ–5:ವಾವಿ:ಜಿ–9000 64:2006–07 ದಿನಾಂಕ: 29–05–2007.
2) ಮೇಲ್ಮನವಿ ಪ್ರಾಧಿಕಾರಿ ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು/64/ಈವ/2007 ದಿನಾಂಕ:08–08–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:06–09–2007.
4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/91/2007–08, ದಿನಾಂಕ: 02–01–2008.

**ಪ್ರಸ್ತಾವನೆ:**

ಶ್ರೀ ಶೇಖ್ ಹುಸೇನ್, ಎಹೆಚ್‌ಸಿ–19, ಡಿಎಆರ್, ರಾಯಚೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

ಶ್ರೀ ಶೇಖ್ ಹುಸೇನ್, ಎಹೆಚ್‌ಸಿ–19, ಡಿಎಆರ್, ರಾಯಚೂರು ದಿನಾಂಕ: 24–07–2004 ರಿಂದ 27–12–2005 ರವರೆಗೆ ಪೊಲೀಸ್ ವಾಹನ ಸಂಖ್ಯೆ: ಕೆಎ–36–ಜಿ–9000ನ್ನು 32,494 ಕಿ.ಮೀ ಚಲಾಯಿಸಿದ್ದು, ಸದರಿ ಅವಧಿಯಲ್ಲಿ ವಾಹನದ ಮ್ಯಾನುಯಲ್ ಹಾಗೂ ಸರ್ವೀಸ್ ಕೂಪನ್‌ಗಳ ಪ್ರಕಾರ 7 ಬಾರಿ ಅಧಿಕೃತ ಡೀಲರ್‌ಗಳಲ್ಲಿ ಸರ್ವೀಸಿಂಗ್ ಮಾಡಿಸಬೇಕಾಗಿದ್ದು, ನೀವು 3 ಬಾರಿ ಮಾತ್ರ ಉಚಿತ ಸರ್ವೀಸಿಂಗ್‌ಗಳನ್ನು ಮಾಡಿಸಿದ್ದು, ಕಾಲಕಾಲಕ್ಕೆ ಸರ್ವೀಸಿಂಗ್

ಮಾಡಿಸದೇ ಇರುವುದರಿಂದ ಇಂಜಿನ್ ಸೀಜ್ ಆಗಿ ರೂ.14,692/– ದುರಸ್ಥಿ ವೆಚ್ಚ ಬಂದಿದ್ದು ಕರ್ತವ್ಯದಲ್ಲಿ ಲೋಪ, ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಶಿಸ್ತು ಪ್ರಾಧಿಕಾರಿಯವರು ಕಾರಣ ಕೇಳುವ ಸೂಚನಾ ಪತ್ರ ನೀಡಿರುತ್ತಾರೆ, ಸದರಿಯವರ ವಿವರಣೆಯನ್ನು ಪರಿಶೀಲಿಸಲಾಗಿ ಇವರಿಬ್ಬರು ವಾಹನವನ್ನು ಸರಿಯಾಗಿ ಕಾಲಕಾಲಕ್ಕೆ ಸರ್ವೀಸಿಂಗ್‌ಗಳನ್ನು ಮಾಡಿಸಿ ವಾಹನವನ್ನು ಸುಸ್ತಿತಿಯಲ್ಲಿ ಇಡಬೇಕಾಗಿತ್ತು. ಆದರೆ ಇವರ ಕರ್ತವ್ಯಲೋಪದಿಂದಾಗಿ ವಾಹನದ ಇಂಜಿನ್ ಸೀಜ್ ಆಗಿದ್ದು ಸರ್ಕಾರದ ಬೊಕ್ಕಸಕ್ಕೆ ರೂ.14,692/– ನಷ್ಟವುಂಟಾಗಿರುವ ಕಾರಣ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧಿಕಾರಿಗಳು, ರಾಯಚೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:29–05–2007ರ ಆದೇಶದಲ್ಲಿ ವಾಹನ ಚಾಲಕರಾದ ಶ್ರೀ ಶೇಖ ಹುಸೇನ್, ಶ್ರೀ ಸಿದ್ರಾಮ ರವರ ವೇತನದಲ್ಲಿ ಸಮನಾಗಿ ರೂ.7346/– ಗಳನ್ನು 9 ಕಂತುಗಳು ರೂ.735/– ಮತ್ತು 10ನೇ ಕಂತು ರೂ.731 ಅನ್ನು ಕಡಿತಗೊಳಿಸುವಂತೆ ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿದಾರರ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಪರಿಗಣಿಸುವಂತಹ ಯಾವುದೇ ಅಂಶಗಳು ಕಂಡುಬಾರದೇ ಇರುವುದರಿಂದ ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:08–08–2007 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ, ಶ್ರೀ ಶೇಖ್ ಹುಸೇನ್ ರವರು ವಾಹನ ನಿರ್ವಹಣೆಯನ್ನು 24–07–2004 ರಿಂದ 27–12–2005 ರವರೆಗೆ ನಿರ್ವಹಿಸಿರುತ್ತಾರೆ. ಈ ಅವಧಿಯಲ್ಲಿ ವಾಹನವು 32,494 ಕಿ.ಮೀ ಓಡಿಸಿದ್ದು, ಮ್ಯಾನ್ಯುಯಲ್ ಪ್ರಕಾರ 7 ಬಾರಿ ಸರ್ವೀಸಿಂಗ್ ಮಾಡಿಸಬೇಕಾಗಿತ್ತು. ಆದರೆ ಸದರಿಯವರು 3 ಬಾರಿ ಸರ್ವೀಸಿಂಗ್ ಮಾಡಿಸಿ ಉಳಿದ ಸರ್ವೀಸಿಂಗ್‌ಗಳನ್ನು 1) 15,000 2) 20,000 3) 25,000 ಮತ್ತು 4) 30,000 ಕಿ.ಮೀ.ಗೆ ಸರ್ವೀಸಿಂಗ್ ಮಾಡಿಸಬೇಕಾಗಿತ್ತು. ಸರ್ವೀಸಿಂಗ್ ಮಾಡಿಸದೇ ವಾಹನ ದುರಸ್ಥಿಗೆ ಬಂದಿರುತ್ತದೆ. ಸದರಿಯವರು ಈ ವಾಹನದ ಚಾರ್ಜ್ ಅನ್ನು ದಿನಾಂಕ:28–12–2005 ರಂದು ಶ್ರೀ ಸಿದ್ರಾಮ ರವರಿಗೆ ವಹಿಸಿದ್ದು, ನಿಜವಾಗಿರುತ್ತದೆ. ಆದುದರಿಂದಲೇ ಶಿಸ್ತು ಪ್ರಾಧಿಕಾರಿಯು ಇಬ್ಬರು ವಾಹನ ಚಾಲಕರಿಗೆ ಸಮಾನವಾದ ಶಿಕ್ಷೆಯನ್ನು ವಿಧಿಸಿರುತ್ತಾರೆ. ಹಾಗಾಗಿ ಅರ್ಜಿದಾರರ ಈ ವಾದವನ್ನು ಒಪ್ಪಲಾಗುವುದಿಲ್ಲ. ಅರ್ಜಿದಾರರು ಒಳ್ಳೆಯ ಕರ್ತವ್ಯ ನಿರ್ವಹಿಸಿರುವುದಕ್ಕೆ ಹಿಂದೂಸ್ಥಾನ್ ಮೋಟಾರ್ಸ್ ಲಿಮಿಟೆಡ್ ರವರಿಂದ ಬಹುಮಾನ ಪಡೆದಿರಬಹುದು. ಆದರೆ ಅದಕ್ಕೂ ಈ ಕರ್ತವ್ಯ ನಿರ್ಲಕ್ಷತನಕ್ಕೂ ಸಂಬಂಧವಿರುವುದಿಲ್ಲ. ಅರ್ಜಿದಾರರ ನಿರ್ಲಕ್ಷತನದಿಂದ ವಾಹನ ದುರಸ್ಥಿಗೆ ಬಂದಿದ್ದು, ಅದಕ್ಕೆ ಕಾರಣವಾಗಿ ಇಬ್ಬರೂ ವಾಹನ ಚಾಲಕರುಗಳಿಗೆ ಶಿಸ್ತು ಪ್ರಾಧಿಕಾರ ವಿಧಿಸಿದ ಶಿಕ್ಷೆಯು ಸಮಂಜಸವಾಗಿರುತ್ತದೆ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯ ಕಂಡು ಬರುವುದಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 30 ಪೊಸಿಅ 2008 ಬೆಂಗಳೂರು, ದಿ: 01ನೇ ಮಾರ್ಚ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶೇಖ್ ಹುಸೇನ್, ಎಹೆಚ್‌ಸಿ–19, ಡಿಎಆರ್, ರಾಯಚೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 419

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ**: ಶ್ರೀ ಶೇಷಾಚಾರ್ಯ, ಎ.ಆರ್.ಎಸ್.ಐ, ಡಿಎಆರ್, ಕೊಪ್ಪಳ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ**:
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಪ್ಪಳ ಜಿಲ್ಲೆ ಕೊಪ್ಪಳ ಇವರ ಆದೇಶ ಸಂಖ್ಯೆ:ಇವಿ/6/2005, ದಿನಾಂಕ: 02–06–2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು/80/ಈವ/2006 ದಿನಾಂಕ: 31–10–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:25–01–2007.
4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)156/2006–07, ದಿನಾಂಕ: 11–05–2007.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ PSC 233 CNS 2007 dated: 30–01–2008.

**ಪ್ರಸ್ತಾವನೆ:**

ಶ್ರೀ.ಶೇಷಾಚಾರ್ಯ, ಎ.ಆರ್.ಎಸ್.ಐ, ಡಿಎಆರ್, ಕೊಪ್ಪಳ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:–**

1) ಆರೋಪಿತ ಪೊಲೀಸ್ ಅಧಿಕಾರಿ ಶ್ರೀ.ಶೇಷಾಚಾರ್ಯ, ಎ.ಆರ್.ಎಸ್.ಐ, ಡಿಎಆರ್, ಕೊಪ್ಪಳ ಇವರು ದಿನಾಂಕ:23–06–2005 ರಂದು ಎಸ್.ಸಿ.ನಂ.50/2002 ನೇದ್ದರಲ್ಲಿಯ ಬಂಧನ ಆರೋಪಿಗಳನ್ನು ರಾಯಚೂರು ಜಿಲ್ಲಾ ಕಾರಾಗೃಹದಿಂದ ಸರ್ಕಾರಿ ವಾಹನ ಸಂಖ್ಯೆ: ಕೆಎ 37 ಜಿ 105 ರಲ್ಲಿ ಕರೆದುಕೊಂಡು ಹೋಗಿ ಕೊಪ್ಪಳ ಜಿಲ್ಲಾ ಸತ್ರ ನ್ಯಾಯಾಲಯದಲ್ಲಿ ಹಾಜರು ಪಡಿಸಲು ಸಿಬ್ಬಂದಿಯವರೊಂದಿಗೆ ಪಾರ್ಟಿಯ ಇನ್ ಚಾರ್ಜ್ ಆಗಿ ನೇಮಿಸಿ ಬೆಂಗಾವಲು ಕರ್ತವ್ಯಕ್ಕೆ ಕಳುಹಿಸಿದಾಗ ಆರೋಪಿಗಳು ಇರುವ ವಾಹನವನ್ನು ತಾವರಗೇರ ಬಸ್ ನಿಲ್ದಾಣದಲ್ಲಿ ನಿಲ್ಲಿಸಿ ಆರೋಪಿತರ ಪೈಕಿ ಬಸಮ್ಮ ಇವಳಿಗೆ ಔಷಧಿ ಅಂಗಡಿಯಲ್ಲಿ ಮಾತ್ರೆ ತರಲು ನಿಲ್ಲಿಸಿ ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿ ಸುಳ್ಳು ನೆಪ ಹೇಳಿ ಕರ್ತವ್ಯದಲ್ಲಿ ವೃತಧರ್ಮವನ್ನು ಮರೆತು ಅತೀವ ನಿರ್ಲಕ್ಷತನ ಪ್ರದರ್ಶಿಸಿರುವಿರಿ ಎಂಬ ಆರೋಪ ಹೊರಿಸಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಪ್ಪಳ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:02–06–2006ರ ಆದೇಶದಲ್ಲಿ ಶ್ರೀ ಶೇಷಾಚಾರ್ಯ, ಎ.ಆರ್.ಎಸ್.ಐ, ಡಿಎಆರ್, ಕೊಪ್ಪಳ ರವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ ಒಂದು ವರ್ಷ ಕಾಲ ಮುಂದುಡಲಾಗಿದೆ ಎಂದು ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 31–10–2006 ರಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿ ಆದೇಶಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿ, ಆ.ಪೊ.ಅ ದಿನಾಂಕ:23–06–2005 ರಂದು ರಾಯಚೂರು ಕಾರಾಗೃಹದಲ್ಲಿರುವ ಆರೋಪಿತರನ್ನು ಕರೆದುಕೊಂಡು ತಾವರಗೇರ ಮಾರ್ಗವಾಗಿ ಬರುವಾಗ ಯಾವುದೋ ಉದ್ದೇಶಕಾಗಿ ವಾಹನವನ್ನು ಬಸ್ ನಿಲ್ದಾಣದಲ್ಲಿ ನಿಲ್ಲಿಸಿ ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆಯನ್ನು ತೋರಿಸಿದ್ದಾರೆಂದು ಆರೋಪಿಸಿ ಶಿಕ್ಷೆ ವಿಧಿಸಲಾಗಿದೆ. ಶ್ರೀ. ಶೇಷಾಚಾರ್ಯ ರವರು ಕರ್ತವ್ಯಲೋಪ ಎಸಗಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಆದರೆ ಈ ಪ್ರಕರಣದಲ್ಲಿ ಆರೋಪಿತರು ತಪ್ಪಿಸಿಕೊಂಡು ಹೋಗಿರುವುದಿಲ್ಲ. ಇವರು ವಾಹನವನ್ನು ಬಸ್ ನಿಲ್ದಾಣದ ಮುಂದೆ ನಿಲ್ಲಿಸಿ ಕರ್ತವ್ಯಲೋಪ ಮಾಡಿರುವುದು ಮಾತ್ರ ಕಂಡು ಬರುತ್ತದೆ. ಸಣ್ಣ ತಪ್ಪಿಗೆ ಅವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಒಂದು ವರ್ಷ ಕಾಲ ಮುಂದೂಡಿರುವುದು ಹೆಚ್ಚಿನ ಶಿಕ್ಷೆಯಾಗಿರುತ್ತದೆ. ಆದ್ದರಿಂದ, ಪರಿಷ್ಕರಣ ಮೇಲ್ಮನವಿ ಅರ್ಜಿ ಪುರಸ್ಕರಿಸಿ ಶಿಸ್ತು ಪ್ರಾಧಿಕಾರ ವಿಧಿಸಿದ ಆದೇಶವನ್ನು ಭಾಗಶ: ಮಾರ್ಪಡಿಸಿ ಶಿಕ್ಷೆ ವಿಧಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅನಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿನಾಂಕ:30–01–2008 ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 326 ಪೊಸಿಅ 2007, ಬೆಂಗಳೂರು ದಿ: 19ನೇ ಫೆಬ್ರವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿಸ್ತುಪ್ರಾಧಿಕಾರದ ಆದೇಶವನ್ನು ಭಾಗಶ: ಮಾರ್ಪಡಿಸಿ, ಶ್ರೀ ಶೇಷಾಚಾರ್ಯ, ಎ.ಆರ್.ಎಸ್.ಐ, ಡಿಎಆರ್, ಕೊಪ್ಪಳ ಇವರ ಮುಂಬರುವ ಒಂದು ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನದ ಬಡ್ತಿಗಳಿಗೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದುಡಲಾಗಿದೆ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 233 ಸಿಎನ್‌ಎಸ್ 2007 ದಿನಾಂಕ: 30–01–2008 ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 415

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ**: ಶ್ರೀ ಟಿ.ಆರ್.ಪವಾರ್, ಪಿಎಸ್ಐ, ಎಂ.ಬಿ.ನಗರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ**: 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಇವಿ/16/ಈವ/2005 ದಿನಾಂಕ: 02–12–2005.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು & ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(6)/95/05–06 ದಿನಾಂಕ: 10–07–2006.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:10–02–07.

4) ಮಹಾ ನಿರ್ದೇಶಕರು & ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2) 157/2006–07, ದಿನಾಂಕ: 19–05–2007.

5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 223 CNS 2007 dated: 19–03–2008.

**ಪ್ರಸ್ತಾವನೆ**:

ಶ್ರೀ ಟಿ.ಆರ್.ಪವಾರ್, ಪಿಎಸ್ಐ, ಎಂ.ಬಿ.ನಗರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

1) ಶ್ರೀ ಟಿ.ಆರ್.ಪವಾರ್, ಪಿಎಸ್ಐ, ಎಂ.ಬಿ.ನಗರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರು

ಅ) ಅಪರಾಧಿ ಸಾಗರ ಇವನನ್ನು ದಿನಾಂಕ:16–02–2004 ರಂದು ದಸ್ತಗಿರಿ ಮಾಡಿ, ಅವನನ್ನು ಜಾಮೀನಿನ ಮೇಲೆ ಬಿಡಲು ರೂ.400/– ಅಕ್ರಮ ಸಂಭಾವನೆ ಪಡೆದು, ದಿನಾಂಕ:16–02–2004 ರಂದು ಸಾಯಂಕಾಲ ಜಾಮೀನಿನ ಮೇಲೆ ಬಿಟ್ಟಿರುವರು.

ಆ) ದಿನಾಂಕ:21–12–2003 ರಂದು ಹಿರೋ ಪುಕ್ ಗಾಡಿ ಕೆಎ–38–ಹೆಚ್7739 ನೇದ್ದನ್ನು ಸ್ವಾಧೀನ ಪಡಿಸಿಕೊಂಡು ದಿನಾಂಕ:26–12–2003 ರಂದು ವಾಹನ ನಿರೀಕ್ಷಕರಿಂದ ತಪಾಸಣೆಗೊಳಿಸಿದರೂ ಕೂಡಾ ಪಿ.ಎಫ್ ಹಾಕದೇ ನ್ಯಾಯಾಲಯದ ಅನುಮತಿ ಪಡೆಯದೇ 4 ತಿಂಗಳ ಕಾಲ ಠಾಣೆಯಲ್ಲಿ ಅನಧಿಕೃತವಾಗಿ ಇಟ್ಟುಕೊಂಡಿರುವುದು.

ಇ) ವಾಹನವನ್ನು ಸಾಗರ ಇವರಿಗೆ ಬಿಡಲು ದಿನಾಂಕ:16–02–2004 ರಂದು ರೂ.2000/– ಅಕ್ರಮ ಸಂಭಾವನೆ ಕೇಳಿ, ಪುನ: ದಿನಾಂಕ:28–02–2004ರಂದು ಸದರಿಯವರು ತನ್ನ ತಂದೆಯೊಂದಿಗೆ ಭೇಟಿಯಾದಾಗ ರೂ.1000 ಅಕ್ರಮ ಸಂಭಾವನೆ ಕೇಳಿ, ಅವರು ಎಸ್.ಪಿ.ಬೀದರ್ ಇವರಿಗೆ ಅರ್ಜಿ ಸಲ್ಲಿಸಲು ಅವಕಾಶ ನೀಡಿರುವರು ಹಾಗೂ ವಾಹನವನ್ನು ಕೊಟ್ಟ ಬಗ್ಗೆ ದುರುದ್ದೇಶ ಪೂರಕವಾಗಿ ದಿನಾಂಕ ಇಲ್ಲದೇ ಸ್ವೀಕೃತಿ ಪಡೆದುಕೊಂಡಿರುವುದು ಅಲ್ಲದೇ, ತನಿಖೆಯ ದಾಖಲೆಗಳನ್ನು ಸರಿಯಾಗಿ ನಿರ್ವಹಿಸಿಲ್ಲ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಆ.ಪೊ.ಅ ಮೇಲಿನ ಆಪಾದನೆಗಳ ಬಗ್ಗೆ ವಿಚಾರಣಾಧಿಕಾರಿಗಳು ವಿಚಾರಣೆ ಕಾಲಕ್ಕೆ ಆಪಾದಿತರ ವಿರುದ್ಧ ಮಾಡಲಾದ ಆಪಾದನೆ ನಂ.2 ಮತ್ತು 3 ಸಾಭೀತಾಗಿರುವುದು ಕಂಡು ಬಂದಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ರವರು ಶ್ರೀ.ಟಿ.ಆರ್.ಪವಾರ್, ಪಿಎಸ್ಐ, ದೇವದುರ್ಗ ಪೊಲೀಸ್ ಠಾಣೆ, ಇವರ ವಾರ್ಷಿಕ ವೇತನ ಬಡ್ತಿಗಳ ಎರಡು ಹಂತಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಿದೆ ಎಂದು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ: 02–12–2005 ರಲ್ಲಿ ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿ ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರು ಶಿಸ್ತು ಪ್ರಾಧಿಕಾರಿಯವರ ಆದೇಶದಲ್ಲಿ ಹಸ್ತಕ್ಷೇಪ ಮಾಡದೇ ಶ್ರೀ ಟಿ.ಆರ್.ಪವಾರ್, ಪಿಎಸ್ಐ ರವರ ಮೇಲ್ಮನವಿಯನ್ನು ತಿರಸ್ಕರಿಸಿ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 10–07–2006 ರಲ್ಲಿ ಆದೇಶಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿ ಪರಿಶೀಲಿಸಲಾಗಿ, ಆ.ಪೊ.ಅ ರವರ ವಿರುದ್ಧ ಸಾಗರ ಮತ್ತು ಅವರ ತಂದೆಯು ನ್ಯಾಯಾಲಯದ ಅಥವಾ ಇಲಾಖಾ ವಿಚಾರಣೆಯಲ್ಲಾಗಲೀ ಏನೂ ತಿಳಿಸಿರುವುದಿಲ್ಲ. ಆದ್ದರಿಂದ ಇದು ಸುಳ್ಳು ಆರೋಪವೆಂದು ಭಾವಿಸಬಹುದಾಗಿದ್ದು, ಆರೋಪವು ನಿಸ್ಸಂಶಯವಾಗಿ ಸಾಭೀತಾಗಿರುವುದಿಲ್ಲ. ಈ ಕಾರಣಗಳಿಂದ ಶಿಸ್ತು ಪ್ರಾಧಿಕಾರದ ಆದೇಶವನ್ನು ರದ್ದುಪಡಿಸಿ ಆ.ಪೊ.ಅ ರವರಿಗೆ ಎಚ್ಚರಿಕೆ ನೀಡಲು ಸರ್ಕಾರ ನಿರ್ಧರಿಸಿದೆ, ಇದನ್ನು ಕರ್ನಾಟಕ

ಲೋಕ ಸೇವಾ ಆಯೋಗದ ಅನುಮೋದನೆಗಾಗಿ ಕೋರಲಾಗಿದ್ದು, ಆಯೋಗವು ದಿನಾಂಕ:19–03–2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 330 ಪೊಸಿಅ 2007 ಬೆಂಗಳೂರು, ದಿ: 1ನೇ ಏಪ್ರಿಲ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಟಿ.ಆರ್.ಪವಾರ್, ಪಿಎಸ್ಐ, ಎಂ.ಬಿ.ನಗರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರಿಗೆ ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನೆಯನ್ನು ರದ್ದುಪಡಿಸಿ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಇವರಿಗೆ '' ಎಚ್ಚರಿಕೆ '' ನೀಡಿ ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 223 ಸಿಎನ್‌ಎಸ್ 2007 ದಿನಾಂಕ: 19–03–2008 ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 637

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ**: ಶ್ರೀ ಆರ್.ಗಿರಿಧರ್, ಎಪಿಸಿ–147, ಡಿಎಆರ್, ಶಿವಮೊಗ್ಗ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ**:1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಉಪಾಧೀಕ್ಷಕರು, ಡಿಎಆರ್, ಶಿವಮೊಗ್ಗ ಇವರ ಆದೇಶ ಸಂಖ್ಯೆ: ಎಸ್‌ಪಿ/ಡಿಎಆರ್/ಶಿಕ್ಷೆ/23/2006 ದಿನಾಂಕ: 02–08–2006.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಶಿವಮೊಗ್ಗ ಜಿಲ್ಲೆ ಇವರ ಆದೇಶ ಸಂಖ್ಯೆ: ಅಪೀಲು/8/2006, ದಿನಾಂಕ: 01–03–2007.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:31–08–2007

4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/80/2007–08, ದಿನಾಂಕ: 20–12–2007.

**ಪ್ರಸ್ತಾವನೆ:**

ಶ್ರೀ ಆರ್.ಗಿರಿಧರ್, ಎಪಿಸಿ–147, ಡಿಎಆರ್, ಶಿವಮೊಗ್ಗ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್(ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

ಆಪಾದಿತ ಪೊಲೀಸ್ ಅಧಿಕಾರಿ ಶ್ರೀ ಆರ.ಗಿರಿಧರ್, ಎಪಿಸಿ–147, ಡಿಎಆರ್, ಶಿವಮೊಗ್ಗ ರವರು ದಿನಾಂಕ: 06–12–2005 ರಂದು ಸಾಯಂಕಾಲ 7.30ರ ಸಮಯದಲ್ಲಿ ಕಛೇರಿಯಲ್ಲಿ ದುರ್ನಡತೆ ಮತ್ತು ದುರ್ವರ್ತನೆಯಿಂದ ವರ್ತಿಸಿದ್ದೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಸಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಉಪಾಧೀಕ್ಷಕರು, ಡಿಎಆರ್, ಶಿವಮೊಗ್ಗ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 02–08–2006ರ ಆದೇಶದಲ್ಲಿ ಅರ್ಜಿದಾರರ ಸದ್ಯದ ವಾರ್ಷಿಕ ವೇತನ ಬಡ್ತಿಯನ್ನು 3 ತಿಂಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡಲಾಗಿದೆ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಶಿವಮೊಗ್ಗ ಜಿಲ್ಲೆ ಇವರು ಶಿಸ್ತು ಪ್ರಾಧಿಕಾರದ ಕ್ರಮವು ಸಮರ್ಥನಿಯವಾಗಿರುವುದರಿಂದ ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 01–03–2007 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಇವರ ವಿರುದ್ಧ ಹೊರಿಸಲಾದ ಆರೋಪಗಳು ಸಾಬೀತಾಗಿದ್ದು, ಇದನ್ನು ಪುನರ್ ಪರಿಶೀಲಿಸಲು ಯಾವುದೇ ದೃಢಪಡುವ ಅಂಶಗಳಿಲ್ಲದಿರುವುದರಿಂದ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಬೇಜವಾಬ್ದಾರಿತನ, ನಿರ್ಲಕ್ಷತೆ ಪ್ರದರ್ಶಿಸಿರುವುದು ಸ್ಪಷ್ಟವಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ

ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯ ಕಂಡು ಬರುವುದಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 06 ಪೊಸಿಅ 2008, ಬೆಂಗಳೂರು ದಿ: 24ನೇ ಜನವರಿ, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ಗಿರಿಧರ್, ಎಪಿಸಿ–147, ಡಿಎಆರ್, ಶಿವಮೊಗ್ಗ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 205

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಎಸ್.ಆರ್. ಹಿರೇಮಠ್, ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಆಡಳಿತ ಸುಧಾರಣೆ–2) ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಕ ಮಾಡುವ ಬಗ್ಗೆ – ಆದೇಶ.

**ಓದಲಾಗಿದೆ:**–1 ನೋಟೀಸ್ ಸಂಖ್ಯೆ ಸಿಆಸುಇ 8 ಎಸ್ಇಎನ್ 2003, ದಿನಾಂಕ 5–2–2004.

2 ಶ್ರೀ ಎಸ್.ಆರ್. ಹಿರೇಮಠ್ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ 9–6–2004.

**ಪ್ರಸ್ತಾವನೆ:–**

ಶ್ರೀ ಎಸ್.ಆರ್. ಹಿರೇಮಠ್, ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಆಡಳಿತ ಸುಧಾರಣೆ–2) ಇವರು ಈ ಹಿಂದೆ ಸಚಿವಾಲಯದ ನಗರಾಭಿವೃದ್ಧಿ ಇಲಾಖೆಯಲ್ಲಿ ಶಾಖಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಬೆಂಗಳೂರು ನಗರದ ಸುತ್ತಮುತ್ತಲಿನ 7 ನಗರಸಭೆಗಳಿಗೆ ಅಧಿಭಾರ ಶುಲ್ಕ ಬಿಡುಗಡೆ ಮಾಡುವ ವಿಚಾರದಲ್ಲಿ ಕಾನೂನು ಇಲಾಖೆಯ ಅಭಿಪ್ರಾಯ ಪಡೆದು ತಿಳಿಸುವಂತೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಮಹಾನಿರೀಕ್ಷಕರು ನಗರಾಭಿವೃದ್ಧಿ ಇಲಾಖೆಯನ್ನು ಕೋರಿದ್ದರು. ಆದರೆ, ಸದರಿಯವರು ಕಾನೂನು ಇಲಾಖೆಯ ಅಭಿಪ್ರಾಯವನ್ನು ಪಡೆಯದೇ ಸದರಿ ನಗರಸಭೆಗಳು ಅಸ್ತಿತ್ವಕ್ಕೆ ಬಂದ ದಿನಾಂಕದಿಂದ ಪ್ರತಿಶತ 2ರ ಅಧಿಭಾರ ಶುಲ್ಕವನ್ನು ಬಿಡುಗಡೆ ಮಾಡಲು ನೋಂದಣಿ ಮಹಾಪರಿವೀಕ್ಷಕರು ಪ್ರಸ್ತಾವನೆಯನ್ನು ಸಲ್ಲಿಸಿದ್ದರೆಂದು ತಪ್ಪು ಮಾಹಿತಿಯನ್ನು ನೀಡಿ ಮೇಲಾಧಿಕಾರಿಗಳಿಂದ ಕಡತವನ್ನು ಅನುಮೋದಿಸಿಕೊಂಡು ಆದೇಶವನ್ನು ಹೊರಡಿಸಲು ಕಾರಣರಾಗುವ ಮೂಲಕ ಸರ್ಕಾರಕ್ಕೆ ಆರ್ಥಿಕ ನಷ್ಟವನ್ನು ಉಂಟು ಮಾಡಲು ಕಾರಣರಾದ ಆರೋಪದ ಬಗ್ಗೆ ವಿಚಾರಣೆಯನ್ನು ಪ್ರಾರಂಭಿಸಲು ಮೇಲೆ ಓದಲಾದ (1)ರಲ್ಲಿ ಓದಲಾದ ದಿನಾಂಕ:05–02–2004ರಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11 ಮತ್ತು 11–ಎ ರ ಅನ್ವಯ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಿ ಪ್ರತಿರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ಅವಕಾಶವನ್ನು ಕಲ್ಪಿಸಲಾಗಿತ್ತು.

ಸದರಿ ಅಧಿಕಾರಿಯವರು ದಿನಾಂಕ:09–06–2004ರಂದು ಪ್ರತಿರಕ್ಷಣಾ ಹೇಳಿಕೆಯನ್ನು ನೀಡಿ ಈ ಪ್ರಕರಣದಲ್ಲಿ ಕಡತವನ್ನು ಸಲ್ಲಿಸಿದಾಗ ಉಪ ಕಾರ್ಯದರ್ಶಿಯವರು ಚರ್ಚಿಸಿ ಎಂದು ಆದೇಶಿಸಿದ್ದು, ಯಾವ ರೀತಿ ಕ್ರಮ ಕೈಗೊಳ್ಳಬೇಕೆಂಬ ಬಗ್ಗೆ ಮಾರ್ಗದರ್ಶನ ನೀಡದೆ ಕಡತದಲ್ಲಿ ಮೇಲಾಧಿಕಾರಿಗಳು ಅನುಮೋದನೆ ನೀಡಿರುವುದರಿಂದ ಈ ಪ್ರಕರಣದಲ್ಲಿ ಮೇಲಾಧಿಕಾರಿಗಳು ಸಹ ಭಾಗಿಯಾಗುತ್ತಾರೆಂದು, ಆದ್ದರಿಂದ ಎಲ್ಲರ ವಿರುದ್ಧವೂ ಸಹ ಶಿಸ್ತು ಕ್ರಮ ಕೈಗೊಳ್ಳುವಂತೆ ಕೋರಿದ್ದರು. ಸದರಿಯವರ ಪ್ರತಿರಕ್ಷಣಾ ಹೇಳಿಕೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಸದರಿಯವರು ತಪ್ಪು ಟಿಪ್ಪಣಿಯನ್ನು ಮಂಡಿಸಿ ಮೇಲಾಧಿಕಾರಿಗಳ ಅನುಮೋದನೆಯನ್ನು ಪಡೆಯಲು ನೇರ ಕಾರಣರಾಗಿರುವುದು ದಾಖಲೆಗಳಿಂದ ಕಂಡುಬಂದಿದ್ದು, ಹಾಗೂ ಜವಾಬ್ದಾರಿಯುತ ಅಧಿಕಾರಿಯಾದ ಅವರು ಉದ್ದೇಶಪೂರ್ವಕವಾಗಿ ತಪ್ಪು ಟಿಪ್ಪಣಿಯನ್ನು ಮಂಡಿಸಿರುವುದು ಮೇಲ್ನೋಟಕ್ಕೆ ಕಂಡುಬಂದ ಹಿನ್ನೆಲೆಯಲ್ಲಿ ಆರೋಪಗಳಲ್ಲಿನ ಸತ್ಯಾಂಶವನ್ನು ಕಂಡುಹಿಡಿಯುವ ಉದ್ದೇಶದಿಂದ ವಿವರವಾದ ವಿಚಾರಣೆಯನ್ನು ನಡೆಸುವ ಅಗತ್ಯತೆ ಇದೆಯೆಂದು ಸರ್ಕಾರವು ಮನಗಂಡು, ಈ ಕೆಳಕಂಡಂತೆ ಆಪಾದಿತನ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಕ ಮಾಡುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 8 ಎಸ್ಇಎನ್ 2003, ಬೆಂಗಳೂರು ದಿನಾಂಕ: 15ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ಎಸ್.ಆರ್. ಹಿರೇಮಠ್, ಸರ್ಕಾರದ ಅಧೀನ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಆಡಳಿತ ಸುಧಾರಣೆ–2) ಇವರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11(2)ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು **ಪೌರಾಡಳಿತ ನಿರ್ದೇಶಕರು, ಬೆಂಗಳೂರು** ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಅದೇ ನಿಯಮಾವಳಿಗಳ ನಿಯಮ 11(5)(ಸಿ)ರ ಅನ್ವಯ ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ (ಪೌರಾಡಳಿತ) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆಯನ್ನು ನಡೆಸಿ ಆರೋಪ ಸಾಬೀತಾಗಿರುವ ಅಥವಾ ಸಾಬೀತಾಗದೇ ಇರುವ ಅಭಿಪ್ರಾಯಗಳನ್ನು ಒಳಗೊಂಡ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಿಯಾದ ಸರ್ಕಾರಕ್ಕೆ 3 ತಿಂಗಳುಗಳ ಒಳಗಾಗಿ ಸಲ್ಲಿಸುವಂತೆ ಆದೇಶಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 516

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಯ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:–** 1 ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 68 ಸಸಿವಿ 2006 ದಿನಾಂಕಃ03–11–2006.

2 ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಯ ಅ.ಟಿ. ಸಂಖ್ಯೆ ಮೂಅಇ 81 ಮೂಇವಿ 2007, ದಿನಾಂಕ 4–10–2007, 1–1–2008.

**ಪ್ರಸ್ತಾವನೆಃ–**

ಮೇಲೆ (1) ರಲ್ಲಿ ಓದಲಾಗಿರುವ ದಿನಾಂಕಃ 3–11–2006ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಗೆ ಮುಂಜೂರಾಗಿರುವ ಒಟ್ಟು 37 ತಾತ್ಕಾಲಿಕ ಹುದ್ದೆಗಳ ಅವಧಿಯನ್ನು ದಿನಾಂಕ 20–9–2007ರವರೆಗೆ ಮುಂದುವರೆಸಲಾಗಿತ್ತು. ಸದರಿ ಹುದ್ದೆಗಳನ್ನು ಮುಂದುವರೆಸುವ ಅಗತ್ಯತೆಯನ್ನು ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಯು ಮೇಲೆ (2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಗಳಲ್ಲಿ ವಿವರವಾದ ಸ್ಪಷ್ಟೀಕರಣವನ್ನು ನೀಡುತ್ತಾ, ಈ ಎಲ್ಲಾ ಹುದ್ದೆಗಳನ್ನು ಪ್ರತಿ ವರ್ಷಕ್ಕೊಮ್ಮೆ ಮುಂದುವರೆಸುವ ಬದಲು ದಿನಾಂಕ 21–9–2008ರಿಂದ ಖಾಯಂ ಆಧಾರದ ಹುದ್ದೆಗಳನ್ನಾಗಿ ಪರಿವರ್ತಿಸುವಂತೆ ಕೋರಿದ್ದಾರೆ.

ಸದರಿ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಮಂಜೂರಾಗಿದ್ದ 37 ಹುದ್ದೆಗಳ ಮುಂದುವರಿಕೆಯು ದಿನಾಂಕ 20–9–2008ರಂದು ಕೊನೆಗೊಳ್ಳುವುದರಿಂದ ಈ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವುದು ಅಗತ್ಯತೆ ಇದೆಯೆಂದು ಸರ್ಕಾರವು ಮನಗಂಡಿದೆ. ಆದ್ದರಿಂದ ಈ ಆದೇಶ.

**¸PÁðgz DzÃ± ¸ASÀ: ¹D¸ÄE 32 ¸C¸Ã 2008, ¨AU¼ÆgÄ, ¢£ÁAPÀ 7£Ã ªÀiÁZïð 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆಗೆ ಮಂಜೂರಾಗಿರುವ ಕೆಳಕಂಡ 37 (ಮುವತ್ತೇಳು) ತಾತ್ಕಾಲಿಕ ಹುದ್ದೆಗಳ ಅವಧಿಯನ್ನು ದಿನಾಂಕ 21–9–2008ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| Sl. No. | Designation of the Post | No. of Posts |
|---|---|---|
| 1. | Principal Secretary to Government / Secretary to Government | 01 |
| | **Personal Staff :** | |
| | Personal Secretary | 01 |
| | Stenographer | 02 |
| | Translator (S.O. or Sr. Asst.) | 01 |
| | Junior Asst. | 01 |
| | Driver | 01 |
| | Dalayat | 02 |
| 2. | Deputy Secretary to Government | 01 |
| | **Personal Staff :** | |
| | Stenographer | 01 |
| | Junior Asst. | 01 |
| | Dalayat | 01 |
| 3. | Desk Officers at Under Secretary/Section Officer Level | 02 |
| | Stenographer | 02 |
| | Section Officer | 01 |

| | | |
|---|---|---|
| | Sr. Asst. | 01 |
| | Assistant | 01 |
| | Junior Asst. | 01 |
| | Typist | 01 |
| | Dalayat | 01 |
| | **R & I Section** | |
| | Section Officer | 01 |
| | Junior Asst. | 02 |
| | Dalayat | 01 |
| 4. | Director | 01 |
| | Asst. Director | 02 |
| | a) Project Monitor and Evaluation | |
| | b) Investors Guidance | |
| | Senior Programmer | 01 |
| | Junior Programmer | 02 |
| | Personal Asst. and other Staff | 03 |
| | Driver | 01 |
| | **TOTAL** | **37** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–07–1996 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಶಿವರಾಮ್**

ಪಿ.ಆರ್. 450

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸು ಇಲಾಖೆ (ಸೇವೆಗಳು–3)

**«µAiÄ B** ªÄÄRªÄAwæAiÄªg ¸aªÁ®AiÄz d£vÁz±ð£ PÆÃ±P ªÄAdÆgÁz ºÄzU¼£Ä UËgªÁ¤v gÁdå¥Á®g ¸aªÁ®AiÄPÌ ¸¼ÁAvj¹ ªÄÄAzÄªg¸Äª §U.

**Nz¯ÁVz B** ¸PÁðj DzÃ± ¸ASå ¹D¸ÄE 28 ¸¹« 2006 ¢£ÁAP 29-9-2006.

**¥ï¸Áª£ B**

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಜನಸ್ಪಂದನ ಕೋಶಕ್ಕೆ ಮಂಜೂರಾಗಿದ್ದ ಒಟ್ಟು 45 ಹುದ್ದೆಗಳ ಪೈಕಿ ಶಾಖಾಧಿಕಾರಿಯ 1 ಹುದ್ದೆ, 'ಸಿ' ವೃಂದದ 10 ಹುದ್ದೆಗಳು ಹಾಗೂ 'ಡಿ' ವೃಂದದ 2 ಹುದ್ದೆಗಳು ಹೀಗೆ ಒಟ್ಟು 13 ಹುದ್ದೆಗಳನ್ನು ದಿನಾಂಕ 29–9–2006ರ ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಮುಖ್ಯಮಂತ್ರಿಗಳ ಸಚಿವಾಲಯದ ಜನತಾದರ್ಶನ ಘಟಕಕ್ಕೆ ದಿನಾಂಕ 1–6–2006ರಿಂದ ಜಾರಿಗೆ ಬರುವಂತೆ ಸ್ಥಳಾಂತರಿಸಲಾಗಿತ್ತು. ಘನತೆವೆತ್ತ ರಾಜ್ಯಪಾಲರು ಜನತಾದರ್ಶನ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ಒಪ್ಪಂದದ ಆಧಾರದ ಮೇಲೆ ನೇಮಕ ಮಾಡಬೇಕಿರುವುದರಿಂದ ಸದರಿ ಹುದ್ದೆಗಳನ್ನು ರಾಜ್ಯಪಾಲರ ಕಛೇರಿಗೆ ಸ್ಥಳಾಂತರಿಸಿ ಮುಂದುವರೆಸಲು ತೀರ್ಮಾನಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 110 ಸಅಸೇ 2008, ಬೆಂಗಳೂರು, ದಿನಾಂಕ 25ನೇ ಮಾರ್ಚ್ 2008.**

ಮುಖ್ಯಮಂತ್ರಿಗಳ ಸಚಿವಾಲಯದ ಜನತಾದರ್ಶನ ಘಟಕದಲ್ಲಿರುವ ಈ ಕೆಳಕಂಡ 13 ಹುದ್ದೆಗಳನ್ನು ರಾಜ್ಯಪಾಲರ ಕಛೇರಿಗೆ ಸ್ಥಳಾಂತರಿಸಿದ ಸರ್ಕಾರವು ಸದರಿ ಹುದ್ದೆಗಳನ್ನು ರಾಷ್ಟ್ರಪತಿಗಳ ಆಡಳಿತ ಜಾರಿಯಲ್ಲಿರುವವರೆಗೆ ಮುಂದುವರೆಸುತ್ತದೆ.

| | | | |
|---|---|---|---|
| 1) | ಶಾಖಾಧಿಕಾರಿ | – | 01 ಹುದ್ದೆ |
| 2) | ಗ್ರೂಫ್ 'ಸಿ' | – | 10 ಹುದ್ದೆಗಳು |
| 3) | ಗ್ರೂಫ್ 'ಡಿ' | – | 02 ಹುದ್ದೆಗಳು |
| | ಒಟ್ಟು | – | 13 ಹುದ್ದೆಗಳು |

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಶಿವರಾಮ್**

ಪಿ.ಆರ್. 544

ಸರ್ಕಾರದ ಅಧೀನ ಕಾರ್ಯದರ್ಶಿ

ಸಿ.ಆ.ಸು. ಇಲಾಖೆ (ಸೇವೆಗಳು–೩)

**ವಿಷಯ:**_ ಶ್ರೀ ಎಸ್.ಆರ್. ಹಿರೇಮಠ್, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಅವರು ಸನ್ಮಾನ್ಯ ರಾಜ್ಯಪಾಲರಿಗೆ ಸಲ್ಲಿಸಿದ ಮೇಲ್ಮನವಿ–ಹಿಂದೆ ವಿಧಿಸಿದ ದಂಡನೆಯನ್ನು ಪರಿಷ್ಕರಿಸಿ ಹೆಚ್ಚಿನ ದಂಡನೆಯನ್ನು ವಿಧಿಸುವ ಬಗ್ಗೆ.

**ಓದಲಾಗಿದೆ:**–1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 19 ಎಸ್ಇಎನ್ 2004 ದಿನಾಂಕ: 26–06–2006.

2. ಶ್ರೀ ಎಸ್.ಆರ್. ಹಿರೇಮಠ್, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಅವರು ಗೌರವಾನ್ವಿತ ರಾಜ್ಯಪಾಲರಿಗೆ ಸಲ್ಲಿಸಿದ ದಿನಾಂಕ:25–09–2006ರ ಮೇಲ್ಮನವಿ.
3. ನೋಟೀಸ್ ಸಂಖ್ಯೆ:ಸಿಆಸುಇ 368 ಎಸ್ಇಎನ್ 06 ದಿನಾಂಕ:06–11–2007.
4. ಶ್ರೀ ಎಸ್.ಆರ್. ಹಿರೇಮಠ್, ಅಧೀನ ಕಾರ್ಯದರ್ಶಿ ಅವರ ಉತ್ತರ ದಿನಾಂಕ:30–11–2007.

**ಪ್ರಸ್ತಾವನೆ:–**

ಕರ್ನಾಟಕ ಸರ್ಕಾರ ಸಚಿವಾಲಯದ ನಗರಾಭಿವೃದ್ಧಿ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ಪುರಸಭೆಯ ಜಾಗವನ್ನು ಮಂಜೂರು ಮಾಡಲು ಸರ್ಕಾರದ ಅನುಮತಿ ನೀಡಿ ಹೊರಡಿಸಲಾದ ಸರ್ಕಾರದ ಆದೇಶದಲ್ಲಿ ಅನುಮೋದನೆ ನೀಡಲಾದ ಅಳತೆಗಿಂತ ಹೆಚ್ಚಿನ ಅಳತೆಯನ್ನು ನಮೂದಿಸುವ ಮೂಲಕ ಪುರಸಭೆಗೆ ಲಕ್ಷಾಂತರ ರೂ.ಗಳ ಆರ್ಥಿಕ ನಷ್ಟವನ್ನುಂಟು ಮಾಡಿದ ಆರೋಪಕ್ಕಾಗಿ ಇತರರೊಡನೆ ಶ್ರೀ ಎಸ್.ಆರ್. ಹಿರೇಮಠ್, ಅಧೀನ ಕಾರ್ಯದರ್ಶಿ ಅವರ ವಿರುದ್ಧವೂ ಸಹ ಇಲಾಖಾ ವಿಚಾರಣೆ ನಡೆದು ಮೇಲೆ (1) ರಲ್ಲಿ ಓದಲಾದ ದಿನಾಂಕ: 26–06–2006ರ ಸರ್ಕಾರದ ಆದೇಶದಲ್ಲಿ ಅವರ 2 ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯುವ ದಂಡನೆ ವಿಧಿಸಲಾಯಿತು. ಈ ಆದೇಶದ ವಿರುದ್ಧ ಶ್ರೀ ಎಸ್.ಆರ್. ಹಿರೇಮಠ್, ಅಧೀನ ಕಾರ್ಯದರ್ಶಿಯವರು ಗೌರವಾನ್ವಿತ ರಾಜ್ಯಪಾಲರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 18 ರನ್ವಯ ಮೇಲ್ಮನವಿ ಸಲ್ಲಿಸಿದರು. ಮೇಲ್ಮನವಿಯನ್ನು ಪರಿಶೀಲಿಸಿದ ಗೌರವಾನ್ವಿತ ರಾಜ್ಯಪಾಲರು ಈ ಕೆಳಕಂಡಂತೆ ಆದೇಶಿಸಿದರು:–

I have considered the appeal petition of Sri. S.R. Hiremath, Under Secretary to Government against the G.O. No.DPAR 19 SEN 2004 dated:26-06-2006 imposing the penalty of withholding of two increments with cumulative effect, in the light of the contentions made in the appeal petition and the connected enquiry records and appeal records. I find that no convincing grounds have been advanced by the Appellant to justify reconsideration of the case.

I am of the considered opinion that the penalty imposed on Sri. S.R. Hiremath, as also on each of the other two AGOs Vis-a-vis the gravity of charges held proved is too mild. I recommend the imposition of the penalty of reduction in the pay of the Appellant to the lowest stage of the time scale of pay with cumulative effect, after due process of law. In the case of other two delinquent officers, imposition of appropriate punishment could be considered under Rule 26 of KCS (CCA) Rules, 1957, if so advised.

ಗೌರವಾನ್ವಿತ ರಾಜ್ಯಪಾಲರ ಮೇಲಿನ ಆದೇಶವನ್ನನುಸರಿಸಿ ಶ್ರೀ ಎಸ್.ಆರ್. ಹಿರೇಮಠ್, ಅಧೀನ ಕಾರ್ಯದರ್ಶಿ ಹಾಗೂ ಇತರರಿಗೆ ಮೇಲೆ (3) ರಲ್ಲಿ ಓದಲಾದ ದಿನಾಂಕ:06–11–2007ರ ನೋಟೀಸ್ ನೀಡಿ ಗೌರವಾನ್ವಿತ ರಾಜ್ಯಪಾಲರ ಆದೇಶ ಕುರಿತು ಅವರ ಹೇಳಿಕೆ ಏನಾದರೂ ಇದ್ದಲ್ಲಿ ಅದನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಅಧಿಕಾರಿಯು ಈ ನೋಟೀಸಿಗೆ ಮೇಲೆ (4) ರಲ್ಲಿ ಓದಲಾದ ದಿನಾಂಕ: 30–11–2007ರ ಉತ್ತರ ಸಲ್ಲಿಸಿ ದಿನಾಂಕ:18–01–1997ರ ಸರ್ಕಾರದ ಆದೇಶಕ್ಕೆ ತಾವು ಸಹಿ ಮಾಡಿಲ್ಲ. ಅದನ್ನು ಸಹಿ ಮಾಡಿರುವುದು ಅಧೀನ ಕಾರ್ಯದರ್ಶಿಗಳು. ಆದ್ದರಿಂದ ಆದೇಶದಲ್ಲಿ ತಪ್ಪು ಅಳತೆ ನಮೂದಿಸಿದಲ್ಲಿ, ಅದಕ್ಕೆ ಅವರು ಜವಾಬ್ದಾರರಾಗುತ್ತಾರೆಯೇ ಹೊರತು ಶಾಖಾಧಿಕಾರಿಯಾದ ತಾನು ಅಲ್ಲವೆಂದು ಪ್ರತಿಪಾದಿಸಿದ್ದಾರೆ. ಒಟ್ಟು 6 ಟಿಪ್ಪಣಿ ಹಾಳೆಗಳ ಪೈಕಿ 4 ಟಿಪ್ಪಣಿ ಹಾಳೆಗಳನ್ನು ಕಾಣೆಯಾಗಿಸಿರುವುದು ವಿಷಯ ನಿರ್ವಾಹಕರೇ ಹೊರತು ಶಾಖಾಧಿಕಾರಿ ಆದ ತಾವು ಅಲ್ಲ. ಆದ್ದರಿಂದ ಟಿಪ್ಪಣಿ ಹಾಳೆ ಕಳುವಾಗಲು ತಾವು ಕಾರಣರಲ್ಲ ಎಂದು ತಿಳಿಸಿದ್ದಾರೆ. ಕಡತವನ್ನು 'ಬಿ' ಶ್ರೇಣಿಯಲ್ಲಿ ಮುಕ್ತಾಯಗೊಳಿಸಿದ್ದು, ಇದಕ್ಕೆ ಅಧೀನ ಕಾರ್ಯದರ್ಶಿಗಳ ಅನುಮೋದನೆ ಅಗತ್ಯವಿದೆ. ಆದ್ದರಿಂದ ಯಾರೂ ಸಹ ಕಡತವನ್ನು ತನಗೆ ಸಲ್ಲಿಸಲಿಲ್ಲವಾದ ಕಾರಣ ಮುಕ್ತಾಯಗೊಂಡ ಕಡತವನ್ನು ತಾನು ಸಹಿ ಮಾಡಿ ದಾಖಲೆ ಕೋಣೆಗೆ ಕಳುಹಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. ಈ ಯಾವ ಪ್ರಕರಣದಲ್ಲೂ ತಮ್ಮ ಪಾತ್ರವಿಲ್ಲವಾದಾಗ್ಯೂ ತಮ್ಮ ವಿರುದ್ಧ ವಿಚಾರಣೆ ನಡೆಸಿ ಸರಿಯಾಗಿ ಪರಿಶೀಲಿಸದೇ ತಮ್ಮ ವಿರುದ್ಧ ಆರೋಪ ಸಾಬೀತಾಗಿದೆ ಎಂದು ತೀರ್ಮಾನಿಸಿ ತಮ್ಮ 2 ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿದು ತಮಗೆ ಅನ್ಯಾಯ ಉಂಟು ಮಾಡಿದ್ದರಿಂದ ತಾನು ಘನತೆವೆತ್ತ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಸಿದೆ. ಆದರೆ, ಪರಿಹಾರ

ದೊರಕಿಸುವ ಬದಲಾಗಿ ಹೆಚ್ಚಿನ ದಂಡನೆಯನ್ನು ವಿಧಿಸಲು ತೀರ್ಮಾನಿಸಿರುವುದು ಅತ್ಯಂತ ಅನ್ಯಾಯವಾಗಿದೆ. ಆದ್ದರಿಂದ ತನಗೆ ನ್ಯಾಯ ನೀಡಿ ಪರಿಷ್ಕೃತ ಆದೇಶ ಹೊರಡಿಸಲು ಕೋರಿದ್ದಾರೆ.

ಶ್ರೀ ಎಸ್.ಆರ್. ಹಿರೇಮಠ್, ಅಧೀನ ಕಾರ್ಯದರ್ಶಿಯವರ ಉತ್ತರವನ್ನು ಪ್ರಕರಣದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ದಾಖಲೆಗಳೊಡನೆ ಪರಿಶೀಲಿಸಲಾಗಿದೆ. ಸಚಿವಾಲಯದ ಶಾಖೆಗಳಲ್ಲಿನ ಕಡತಗಳನ್ನು ಮುಕ್ತಾಯಗೊಂಡ ನಂತರ ಹೊಲಿಸಿ ವಿಂಗಡಿಸಿ, ಕಡತ ಕವಚದ ಮೇಲೆ ಸಹಿ ಮಾಡಿ ಮುಕ್ತಾಯಗೊಂಡ ಕಡತಗಳ ದರ್ಜೆವಾರು ಪಟ್ಟಿ ಮಾಡಿ ಅದಕ್ಕೆ ತಾನೇ ಸಹಿ ಮಾಡಿ ಪಟ್ಟಿಯೊಡನೆ ದಾಖಲೆಗಳನ್ನು ದಾಖಲೆ ಕೋಣೆಗೆ ಕಳುಹಿಸುವುದು ಶಾಖಾಧಿಕಾರಿಯ ಕರ್ತವ್ಯ ಆಗಿದ್ದು, ಇದನ್ನು ಸಚಿವಾಲಯ ಕೈಪಿಡಿಯಲ್ಲಿಯೇ ನಿಗಧಿಪಡಿಸಿದೆ. ಈ ಕಾರ್ಯದ ಉಸ್ತುವಾರಿಯನ್ನು ಖುದ್ದು ಶಾಖಾಧಿಕಾರಿಯೇ ನಿರ್ವಹಿಸಬೇಕು. ಇದಕ್ಕೆ ವ್ಯತಿರಿಕ್ತವಾಗಿ ಪ್ರಸ್ತುತ ಪ್ರಕರಣದಲ್ಲಿ 'ಬಿ' ದರ್ಜೆಯಡಿ ಮುಕ್ತಾಯಗೊಂಡ ಕಡತವನ್ನು ದಾಖಲೆ ಕೋಣೆಗೆ ಕಳುಹಿಸದೇ ಉಳಿದಿರುವುದು ಕಂಡು ಬಂದಿದೆ. ಅಧಿಕಾರಿಯು ಸಹ ತನ್ನ ರಕ್ಷಣಾ ಹೇಳಿಕೆಯಲ್ಲಿ ತಾನು ಶಾಖಾಧಿಕಾರಿಯಾಗಿದ್ದಾಗಿ ನಿವೇದಿಸಿದ್ದಾರೆ. ಮುಕ್ತಾಯಗೊಳಿಸಲ್ಪಟ್ಟ ಯಾವುದೇ ಕಡತವನ್ನು ಯಾರೂ ಸಲ್ಲಿಸುವುದಿಲ್ಲ. ಕಡತದಲ್ಲಿನ ಅನಗತ್ಯ ಕರಡು ಇತ್ಯಾದಿಗಳನ್ನು ತೆಗೆದು ಪತ್ರ ವ್ಯವಹಾರ, ಟಿಪ್ಪಣಿಯ ಹಾಳೆಗಳನ್ನು ಸುಸಂಬದ್ಧವಾಗಿ ಜೋಡಿಸಿ ಅವುಗಳಿಗೆ ಪುಟ ಸಂಖ್ಯೆಗಳನ್ನು ಪ್ರತ್ಯೇಕವಾಗಿ ನೀಡಿ, ಒಟ್ಟು ಪುಟಗಳ ಸಂಖ್ಯೆಯನ್ನು ಕಡತದ ಕವಚದ ಮೇಲೆ ನಮೂದಿಸಿ ಶಾಖಾಧಿಕಾರಿಗಳ ಸಹಿಯೊಡನೆ ದಾಖಲೆ ಕೋಣೆಗೆ ಕಳುಹಿಸಬೇಕು. ಇದರ ಜವಾಬ್ದಾರಿ ಶಾಖಾಧಿಕಾರಿಯದ್ದು, ಇದನ್ನು ನಿರ್ವಹಿಸದ ಕಾರಣ ಟಿಪ್ಪಣಿ ಹಾಳೆಗಳು ಕಾಣೆಯಾಗಿರುವುದಕ್ಕೆ ಅಧಿಕಾರಿಯೇ ಜವಾಬ್ದಾರರಾಗಿದ್ದಾರೆ. ಆದ್ದರಿಂದ ಶ್ರೀ ಎಸ್.ಆರ್. ಹಿರೇಮಠ್, ಅಧೀನ ಕಾರ್ಯದರ್ಶಿಯವರ ಅಹವಾಲುಗಳನ್ನು ಒಪ್ಪಿಕೊಳ್ಳದೇ ಅವರಿಂದ ತೀವ್ರ ದುರ್ನಡತೆ ಉಂಟಾಗಿದೆ ಹಾಗೂ ಹಿಂದೆ ವಿಧಿಸಿದ್ದಕ್ಕಿಂತ ಹೆಚ್ಚಿನ ಪ್ರಮಾಣದ ದಂಡನೆ ವಿಧಿಸುವ ಅವಶ್ಯಕತೆ ಇದೆ ಎಂಬ ತೀರ್ಮಾನಕ್ಕೆ ಬಂದು ಈ ಮುಂದಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 368 ಎಸ್‌ಇಎನ್ 2006 ಬೆಂಗಳೂರು ದಿನಾಂಕ: 14ನೇ ಮೇ 2008**

ಶ್ರೀ ಎಸ್.ಆರ್. ಹಿರೇಮಠ್, ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ಕರ್ನಾಟಕ ಸರ್ಕಾರ ಸಚಿವಾಲಯ ಅವರ 2 ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿದು ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 19 ಎಸ್‌ಇಎನ್ 2004 ದಿನಾಂಕ:26.06.2004 ನ್ನು ಮಾರ್ಪಡಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ:–

(i) ಶ್ರೀ ಎಸ್.ಆರ್. ಹಿರೇಮಠ್, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಸಚಿವಾಲಯ ಅವರ ವೇತನವನ್ನು ವೇತನ ಶ್ರೇಣಿ ರೂ.14050–350–14400–400–16800–450–19500–525–22650–600–25050ರಲ್ಲಿನ ಕನಿಷ್ಠ ಹಂತ ರೂ.14050/–ಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಫೆಬ್ರವರಿ 2010 ರವರೆಗೆ ಇಳಿಸಲಾಗಿದೆ.

(ii) ದಂಡನೆ ಅವಧಿಯಲ್ಲಿ ಅಧಿಕಾರಿಯ ವೇತನವು ಸ್ಥಿರವಾಗಿರುತ್ತದೆ.

ಉಳಿದ ಆರೋಪಿಗಳಾದ ಶ್ರೀ ಡಿ.ಬಿ. ಗಣಾಚಾರಿ, ನಿವೃತ್ತ ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಜಿ. ಮುನಿರಾಜಪ್ಪ ಅವರ ಪ್ರಕರಣಗಳನ್ನು ಪುನರಾವಲೋಕಿಸಲು ಯಾವುದೇ ಹೊಸ ಅಂಶ ಲಭ್ಯವಿಲ್ಲದಿರುವ ಕಾರಣ ಅದನ್ನು ಕೈಬಿಡಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 787

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3).

**«µAiÄB** ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ ಮತ್ತು ಶ್ರೀ ಎಂ. ದೇವರಾಜು, ಶಾಖಾಧಿಕಾರಿ, ಆರ್ಥಿಕ ಇಲಾಖೆ ಇವರುಗಳನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**¸PÁðgz DzÃ± ¸ASÁ ¹D¸ÄE 6 ¸ÃE« 2008, ¨AU¼ÆgÄ, ¢£ÁAP 29£Ä K¦æ¯ï 2008.**

ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ-5) ಮತ್ತು ಶ್ರೀ ಎಂ. ದೇವರಾಜು, ಶಾಖಾಧಿಕಾರಿ, ಆರ್ಥಿಕ ಇಲಾಖೆ (ವೆಚ್ಚ-5) ಇವರುಗಳು ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಪಟ್ಟ ಪ್ರಕರಣದಲ್ಲಿ ಆರ್ಥಿಕ ಇಲಾಖೆಯಲ್ಲಿ ತಮ್ಮ ಮೇಲಧಿಕಾರಿಗಳು ತೆಗೆದುಕೊಂಡ ತೀರ್ಮಾನಕ್ಕೆ ವ್ಯತಿರಿಕ್ತವಾಗಿ ಹಾಗೂ ಆಡಳಿತ ಇಲಾಖೆಯ ಪ್ರಸ್ತಾವನೆಗೆ ಅನುಕೂಲಕರವಾಗುವ ರೀತಿಯಲ್ಲಿ ಸರ್ಕಾರಿ ವೈಮಾನಿಕ ತರಬೇತಿ ಸಂಸ್ಥೆ ಇದರ ನಿರ್ವಹಣೆಯನ್ನು ಸಹ ಗುತ್ತಿಗೆಗೆ ನೀಡುವ ವಿಚಾರದಲ್ಲಿ ಅಭಿಪ್ರಾಯ ನೀಡಿದ್ದು, ಈ ಮೂಲಕ ತೀವ್ರವಾದ ದುರ್ನಡತೆ ಎಸಗಿರುವುದರಿಂದಲೂ ;

ಆನಂತರ ಆರ್ಥಿಕ ಇಲಾಖೆಯಲ್ಲಿನ ಸಂಬಂಧಪಟ್ಟ ಕಡತ ಸಂಖ್ಯೆ ಆಇ 244 ವೆಚ್ಚ-5 2008ನ್ನು ಕಾಣೆಯಾಗಿಸಿ ದುಷ್ಕೃತ್ಯವೆಸಗಿರುವುದು ಕಂಡುಬಂದಿರುವುದರಿಂದಲೂ ;

ಮೇಲಿನ ದುರ್ನಡತೆಗಾಗಿ ಈ ಇಬ್ಬರು ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮವನ್ನು ಜರುಗಿಸಲು ಉದ್ದೇಶಿಸಿದ್ದು, ಸದರಿ ಶಿಸ್ತು ಕ್ರಮವನ್ನು ಬಾಕಿಯಿಟ್ಟು ಈ ಇಬ್ಬರು ಅಧಿಕಾರಿಗಳನ್ನು ಸೇವೆಯಿಂದ ಅಮಾನತ್ತುಗೊಳಿಸುವುದು ಅವಶ್ಯಕವೆಂದು ಸರ್ಕಾರವು ಭಾವಿಸಿರುವುದರಿಂದಲೂ ;

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಡಿ)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ ಮತ್ತು ಶ್ರೀ ಎಂ. ದೇವರಾಜು, ಶಾಖಾಧಿಕಾರಿ, ಆರ್ಥಿಕ ಇಲಾಖೆ (ವೆಚ್ಚ-5) ಅವರುಗಳ ವಿರುದ್ಧ ಶಿಸ್ತಿನ

ಕ್ರಮವನ್ನು ಕೈಗೊಳ್ಳುವುದನ್ನು ಬಾಕಿ ಇಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರುಗಳನ್ನು ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ಎಂ. ದೇವರಾಜು, ಶಾಖಾಧಿಕಾರಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರು ಕೆ.ಸಿ.ಎಸ್.ಆರ್ಸ್. ನಿಯಮ 98ರನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಟಿ. ಅಶೋಕ್, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ಎಂ. ದೇವರಾಜು, ಶಾಖಾಧಿಕಾರಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಮೇಲಿನ ಇಬ್ಬರು ಅಧಿಕಾರಿಗಳ ಸ್ಥಾನಕ್ಕೆ ತಾತ್ಕಾಲಿಕವಾಗಿ ಬದಲಿ ವ್ಯವಸ್ಥೆಯನ್ನು ಮಾಡಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ ಇವರು ಕ್ರಮವನ್ನು ಕೈಗೊಳ್ಳುತ್ತಾರೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**JA. J¸ï. ²ªgÁªïï**

ಪಿ.ಆರ್. 712

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸು ಇಲಾಖೆ (ಸೇವೆಗಳು-3)

ವಿಷಯಃ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

ಓದಲಾಗಿದೆಃ1) ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 20 ಸಸಿವಿ 2007, ದಿನಾಂಕ 10-4-2007.

2) ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಕಡತ ಸಂಖ್ಯೆ ಐಟಿಡಿ 7 ಡಿಐಎಸ್ 2008.

**¥ï¸Áª£É B**

ಮೇಲೆ (1)ರಲ್ಲಿ ಓದಲಾದ ದಿನಾಂಕ 10-4-2007ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ 1-4-2007ರಿಂದ ಒಂದು ವರ್ಷದವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿತ್ತು.

| | | |
|---|---|---|
| 1) | ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿ | 1 ಹುದ್ದೆ |
| 2) | ಅಧೀನ ಕಾರ್ಯದರ್ಶಿ / ಶಾಖಾಧಿಕಾರಿ | 1 ಹುದ್ದೆ |
| 3) | ಆರ್ಥಿಕ ಸಲಹೆಗಾರರು (ವೇತನ ಶ್ರೇಣಿ ರಹಿತ) | 1 ಹುದ್ದೆ |
| 4) | ಉಪಕಾರ್ಯದರ್ಶಿ | 1 ಹುದ್ದೆ |
| 5) | ಶಾಖಾಧಿಕಾರಿ | 1 ಹುದ್ದೆ |
| 6) | ಪತ್ರಾಂಕಿತ ಆಪ್ತ ಸಹಾಯಕರು | 1 ಹುದ್ದೆ |
| 7) | ಹಿರಿಯ ಸಹಾಯಕರು / ಶೀಘ್ರಲಿಪಿಗಾರರು | 3 ಹುದ್ದೆಗಳು |
| 8) | ಕಿರಿಯ ಸಹಾಯಕರು | 1 ಹುದ್ದೆ |
| 9) | ದಲಾಯತ್ | 3 ಹುದ್ದೆಗಳು |
| 10) | ಚಾಲಕರು | 2 ಹುದ್ದೆಗಳು |
| | **MlÄ** | **15 ºÄzU¼Ä** |

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯು ಮೇಲೆ (2)ರಲ್ಲಿ ಓದಲಾದ ತನ್ನ ಕಡತದಲ್ಲಿ ಕೇವಲ 11 ಹುದ್ದೆಗಳನ್ನು ಮಾತ್ರ ದಿನಾಂಕ 1-4-2008ರಿಂದ 1 ವರ್ಷದವರೆಗೆ ಮುಂದುವರೆಸಲು ಕೋರಿದೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**¸PÁðgz DzÃ± ¸ASå ¹D¸ÄE 267 ¸C¸Ã 2008, ¨AU¼ÆgÄ, ¢£ÁAP 2£Ã ªÄÃ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳಿಂದಾಗಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ 1-4-2008ರಿಂದ 1 ವರ್ಷದ ಅವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸುತ್ತದೆ.

| | | |
|---|---|---|
| 1) | ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿ | 1 ಹುದ್ದೆ |
| 2) | ವಿಶೇಷ ಕರ್ತವ್ಯಾಧಿಕಾರಿ (ವೇತನ ಶ್ರೇಣಿ ರಹಿತ) | 1 ಹುದ್ದೆ |
| 3) | ಆಪ್ತ ಕಾರ್ಯದರ್ಶಿ ಗ್ರೇಡ್-2 / ಪತ್ರಾಂಕಿತ ಆಪ್ತ ಸಹಾಯಕ | 1 ಹುದ್ದೆ |
| 4) | ಹಿರಿಯ ಶೀಘ್ರಲಿಪಿಗಾರರು / ಶೀಘ್ರಲಿಪಿಗಾರರು | 3 ಹುದ್ದೆಗಳು |

| | | |
|---|---|---|
| 5) | ಹಿರಿಯ ಚಾಲಕರು / ಚಾಲಕರು | 2 ಹುದ್ದೆಗಳು |
| 6) | ಜಮೇದಾರ್ / ದಲಾಯತ್ | 3 ಹುದ್ದೆಗಳು |
| | MlÄ | 11 ºÄzU¼Ä |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10-7-1996ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
JA. J¸ï. ²ªgÁªiï
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸು ಇಲಾಖೆ (ಸೇವೆಗಳು-3)

ಪಿ.ಆರ್. 766

«µAiÄB ಶ್ರೀ ಕೆ. ಎಸ್. ರಾಘವೇಂದ್ರರಾವ್ (ನಿವೃತ್ತ ಉಪನಿಬಂಧಕರು) ಶಿಷ್ಟಾಚಾರ ಇವರನ್ನು ನಿವೃತ್ತಿ ನಂತರ ಸಮಾಲೋಚಕರು ಶಿಷ್ಟಾಚಾರ ಆಗಿ ಸಂಚಿತ ವೇತನದ ಆಧಾರದ ಮೇಲೆ ನೇಮಕ ಮಾಡಿಕೊಳ್ಳುವ ಬಗ್ಗೆ.

Nz¯ÁVzB ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಇವರ ಪತ್ರ ಸಂಖ್ಯೆ ಹೆಚ್‌ಸಿಇ 388/91, ದಿನಾಂಕ 30-4-2008.

**¥i¸Áª£ B**

ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಅವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಸೇವೆಯಿಂದ ದಿನಾಂಕ 30-4-2008ರಂದು ವಯೋ ನಿವೃತ್ತಿ ಹೊಂದಿದ ಶ್ರೀ ಕೆ. ಎಸ್. ರಾಘವೇಂದ್ರರಾವ್ (ನಿವೃತ್ತ ಉಪನಿಬಂಧಕರು), ಶಿಷ್ಟಾಚಾರ ಅವರನ್ನು ಶಿಷ್ಟಾಚಾರದ ಅಗತ್ಯತೆಗಳ ಬಗ್ಗೆ ಉಸ್ತುವಾರಿ ವಹಿಸಿಕೊಳ್ಳುವ ಸಲುವಾಗಿ ಮಾಸಿಕ 20,000-00 ಸಾವಿರ ರೂಪಾಯಿಗಳ ಸಂಚಿತ ವೇತನದ ಆಧಾರದ ಮೇಲೆ ಒಂದು ವರ್ಷದ ಅವಧಿಗೆ ಸಮಾಲೋಚಕರು (ಶಿಷ್ಟಾಚಾರ) ಆಗಿ ನೇಮಕ ಮಾಡಿಕೊಳ್ಳಲು ಸರ್ಕಾರದ ಅನುಮತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**¸PÁðgz DzÃ± ¸ASÉ ¹D¸ÄE 25 ¸ÃG£Á 2008 ¨AU¼ÆgÄ, ¢£ÁAP 15£Ã ªÄÄ 2008.**

ನಿವೃತ್ತ ಉಪ ನಿಬಂಧಕರು (ಶಿಷ್ಟಾಚಾರ) ಅವರ ಸೇವೆಯನ್ನು ಸಮಾಲೋಚಕರು (ಶಿಷ್ಟಾಚಾರ) ಅಗಿ ಸಂಚಿತ ವೇತನದ ಆಧಾರದ ಮೇಲೆ ಪಡೆಯುವ ಕರ್ನಾಟಕ ಉಚ್ಚನ್ಯಾಯಾಲಯದ ಪ್ರಸ್ತಾವನೆಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಹಾಗೂ ನಿಯಮಗಳನ್ನು ಪಾಲಿಸುವುದು.

ಅನಧಿಕೃತ ಟಿಪ್ಪಣಿ ಸಂಖ್ಯೆ ಸಿಆಸುಇ 183 ಸೇನಿಎ 2008, ದಿನಾಂಕ 5-5-2008ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ (ಸೇವಾ ನಿಯಮಗಳು) ಸಹಮತಿ ಮತ್ತು ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 534 ವೆಚ್ಚ-7 : 2008ರಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
JA. J¸ï. ²ªgÁªiï
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3)

ಪಿ.ಆರ್. 786

**ವಿಷಯ :** ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಪ್ರಕಾರ್ಯಗಳು ಮತ್ತು ಅಧಿಕಾರಗಳು.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಿಐ 204 ಐಸಿಎಸ್ 79, ದಿ : 5–1–1979.
2) ಸಿ.ಆ.ಸು.ಇ. 654 ಎಸ್‌ಜೆಡಿ 80, ಬೆಂಗಳೂರು, ದಿನಾಂಕ 7–7–1980.
3) ಸಿ.ಆ.ಸು.ಇ. (ಸಾಉಇ) ಎಸ್‌ಬಿಸಿ 81, ದಿನಾಂಕ 3–3–1981.
4) ಸಿ.ಆ.ಸು.ಇ. (ಸಾಉಇ) 15 ಎಂಇಎ 82, ದಿನಾಂಕ 9–2–1982.
5) ಸಿ.ಆ.ಸು.ಇ. (ಸಾಉಮ) ಎಸ್‌ಪಿಯು 83, ದಿನಾಂಕ 7–9–1983.
6) ಡಿ.ಪಿ.ಎ:ಎಂ: 248, ದಿನಾಂಕ 21–12–1997.
7) ಅಧಿಸೂಚನೆ ಸಂಖ್ಯೆ: ಡಿಸಿಎ 3 ಎಆರ್‌ಬಿ 2004, ದಿ : 24–3–2005.
8) ಸುತ್ತೋಲೆ ಸಂಖ್ಯೆ: ಡಿಪಿಎಆರ್ 26 ಎಸ್‌ಪಿಯು 97, ದಿ : 29–3–97.
9) ದಿನಾಂಕ 17–08–2007 ರ ಸಭೆಯ ನಡವಳಿಗಳು.
10) ಸರ್ಕಾರದ ಸುತ್ತೋಲೆ ಸಂಖ್ಯೆ: ಡಿಪಿಇ 13 ಎಆರ್‌ಯು 2007(ಪಿ), ದಿನಾಂಕ: 7–9–2007.

**ಪ್ರಸ್ತಾವನೆ :**

ಕರ್ನಾಟಕ ಸಾರ್ವಜನಿಕ ಉದ್ದೆಮೆಗಳ ಇಲಾಖೆಯು ನಿರ್ವಹಿಸುತ್ತಿರುವ ಪಾತ್ರವನ್ನು ಬಂಡವಾಳ ಹಿಂತೆಗೆದುಕೊಳ್ಳುವಿಕೆ ಹಾಗೂ ರಾಜ್ಯ ಸಾರ್ವಜನಿಕ ಉದ್ದಿಮೆಗಳ ಇಲಾಖೆ ಈ ಮೊದಲಿದ್ದ ಕರ್ನಾಟಕ ರಾಜ್ಯ ಸಾರ್ವಜನಿಕ ಉದ್ದಿಮೆಗಳ ಮಹೋದ್ಯಮಗಳ ಕರ್ತವ್ಯಗಳನ್ನು

ಮುಂದುವರೆಸಿಕೊಂಡು ನಿರ್ವಹಿಸುತ್ತಿತ್ತು. ಪ್ರಸ್ತುತ ಸಾರ್ವಜನಿಕ ಉದ್ದಿಮೆಗಳ ಇಲಾಖೆಗೆ ರಾಜ್ಯ ಸಾರ್ವಜನಿಕ ಉದ್ದಿಮೆಗಳ ಆಡಳಿತ ಇಲಾಖೆಗಳ ಪ್ರಕಾರ್ಯಗಳನ್ನು ಹಾಗೂ ಅಧಿಕಾರಗಳನ್ನು ನೀಡುವುದು ಅವಶ್ಯಕವೆಂದು ಪುನರುಚ್ಚರಿಸಿದೆ. ಅದರಂತೆ ಈ ಕೆಳಗಿನ ಆದೇಶ.

**¸PÁðgz DzÃ± ¸ASå: ¹D¸ÄE 538 ¸C¸Ã 2007, ¨AU¼ÆgÄ, ¢£ÁAP: 13£Ã ªiÁZïð 2008.**

ಸಾರ್ವಜನಿಕ ಉದ್ದಿಮೆಗಳ ಇಲಾಖೆಗೆ ರಾಜ್ಯ ಸಾರ್ವಜನಿಕ ವಲಯದ ಉದ್ದಿಮೆಗಳಿಗೆ ಸಂಬಂಧಿಸಿದಂತೆ ಈ ಕೆಳಗಿನ ವಿಷಯಗಳಲ್ಲಿ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ವಹಿಸಲಾಗಿದೆ.

1. ಕರ್ನಾಟಕ ಸರ್ಕಾರದ (ವ್ಯವಹಾರ ಹಂಚಿಕೆ) ನಿಯಮಗಳು 1977ರ ಹಾಗೂ ಅದರ ತಿದ್ದುಪಡಿಗಳ ಅಡಿಯಲ್ಲಿನ ಅನುಸೂಚಿ IIರ ನಿಯಮ "ಪಿ" ಯಲ್ಲಿ ಸೂಚಿಸಿರುವ ಎಲ್ಲಾ ವಿಷಯಗಳು.

2. ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 72 ಬಿ ಪ್ರಕಾರ ಎಲ್ಲಾ ಆಡಳಿತಾತ್ಮಕ ಇಲಾಖೆಗಳು ಈ ಕೆಳಗೆ ನಮೂದಿಸಿರುವ ಯಾವುದೇ ಪ್ರಸ್ತಾವನೆಗಳ ಬಗ್ಗೆ ಸಚಿವ ಸಂಪುಟದ ಅನುಮೋದನೆ ಪಡೆಯುವ ಅಥವಾ ಅಂತಿಮ ತೀರ್ಮಾನ ತೆಗೆದುಕೊಳ್ಳುವ ಮುನ್ನ ಸಾರ್ವಜನಿಕ ಉದ್ದಿಮೆಗಳನ್ನು ಇಲಾಖೆಯು ಸಮಾಲೋಚಿಸತಕ್ಕದ್ದು.

   i) ಕರ್ನಾಟಕ ಸರ್ಕಾರದ ಪೂರ್ಣಸ್ವಾಮ್ಯದಲ್ಲಿ ಅಥವಾ ಆಂಶಿಕವಾಗಿ ಆರ್ಥಿಕ ನೆರವಿನಿಂದ ಅಥವಾ ಸಾರ್ವಜನಿಕ ವಲಯದಲ್ಲಿ ಹೊಸ ನಿಗಮ ಅಥವಾ ಕಂಪನಿಗಳ ಸೃಜನೆ.

   ii) ಕರ್ನಾಟಕ ಸರ್ಕಾರ ಅಥವಾ ಸಾರ್ವಜನಿಕ ಉದ್ದಿಮೆಯು, ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಹೂಡಿಕೆ ಮತ್ತು ಅಭಿವೃದ್ಧಿ ನಿಗಮ ಮತ್ತು ಕರ್ನಾಟಕ ರಾಜ್ಯ ಹಣಕಾಸು ನಿಗಮಗಳನ್ನು ಹೊರತುಪಡಿಸಿ ಹೊಸ ಅಥವಾ ಈಗ ಅಸ್ತಿತ್ವದಲ್ಲಿರುವ ನಿಗಮ ಅಥವಾ ಕಂಪನಿಗೆ ಷೇರು ಬಂಡವಾಳ ತೊಡಗಿಸುವುದರಲ್ಲಿನ ಸಹಭಾಗಿತ್ವದ ಪ್ರಸಂಗಗಳು.

   iii) ಕರ್ನಾಟಕ ರಾಜ್ಯ ಕೈಗಾರಿಕಾ ಬಂಡವಾಳ ಹೂಡಿಕೆ ಮತ್ತು ಅಭಿವೃದ್ಧಿ ನಿಗಮ ಮತ್ತು ಕರ್ನಾಟಕ ರಾಜ್ಯ ಹಣಕಾಸು ನಿಗಮವು ಹೊಸ ಅಥವಾ ಈಗ ಅಸ್ತಿತ್ವದಲ್ಲಿರುವ ನಿಗಮ ಅಥವಾ ಕಂಪನಿಗಳಲ್ಲಿ 50 ಲಕ್ಷಕ್ಕೂ ಮೀರಿ ಬಂಡವಾಳ ಹೂಡುವ ಪ್ರಸಂಗಗಳು.

   iv) ಸಾರ್ವಜನಿಕ ಉದ್ದಿಮೆಗಳ ಮುಚ್ಚುವಿಕೆ, ವಿಲೀನಗೊಳಿಸುವಿಕೆ ಅಥವಾ ವಿನ್ಯಾಸದಲ್ಲಿನ ಪುನರ್ ಸಂಘಟನೆಯಂಥ ಇತರೆ ಪ್ರಮುಖ ಯೋಜನೆಗಳ ಪ್ರಸಂಗಗಳು.

   v) ರಾಜ್ಯ ಸ್ವಾಮ್ಯದ ಸಾರ್ವಜನಿಕ ನಿಗಮ, ಕಂಪನೆಗಳು, ಉದ್ದಿಮೆಗಳ ಮತ್ತು ಯೋಜನೆಗಳಲ್ಲಿ ಬಂಡವಾಳ ವೆಚ್ಚ ಅಂದಾಜುಗಳು ಶೇಕಡ 20ಕ್ಕೂ ಹೆಚ್ಚು ಅಥವಾ ರೂ. 25 ಲಕ್ಷಕ್ಕೂ ಕಡಿಮೆ (ಇದರಲ್ಲಿ ಯಾವುದು ಕಡಿಮೆಯೋ ಅದು) ಇದ್ದರೆ ಅಂಥ ಕಡೆ ಬಂಡವಾಳ ವೆಚ್ಚ ಅಂದಾಜುಗಳನ್ನು ಹೆಚ್ಚಿಸುವ ಪ್ರಸಂಗಗಳು.

3. i) ಸಾರ್ವಜನಿಕ ಉದ್ದಿಮೆಗಳ ಇಲಾಖೆಯು ಸರ್ಕಾರದ ಒಂದು ಅಂಗವಾಗಿ ಕಾರ್ಯನಿರ್ವಹಿಸುತ್ತಾ, ಸಾರ್ವಜನಿಕ ಉದ್ದಿಮೆಗಳ ಸಮನ್ವಯ ಹಾಗೂ ಉಸ್ತುವಾರಿ ಪ್ರಾಧಿಕಾರವಾಗಿ ಕೆಲಸ ನಿರ್ವಹಿಸುತ್ತಾ, ಸಾರ್ವಜನಿಕ ಉದ್ದಿಮೆಗಳಿಗೆ ಮಾರ್ಗದರ್ಶಕವಾಗಿ ಕೆಲಸ ಮಾಡತಕ್ಕದ್ದು. ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಪ್ರಧಾನ ಕಾರ್ಯದರ್ಶಿ ಅಥವಾ ಅವರಿಂದ ನಾಮನಿರ್ದೇಶಿಸ್ಪಟ್ಟದ್ದ ಉಪಕಾರ್ಯದರ್ಶಿ ದರ್ಜೆಗಿಂತ ಕಡಿಮೆ ದರ್ಜೆಯವರಲ್ಲದ ಅಧಿಕಾರಿಯು ಪ್ರತಿ ಸಾರ್ವಜನಿಕ ಉದ್ದಿಮೆಯ ನಿರ್ದೇಶಕರ ಮಂಡಳಿಗೆ ನಿರ್ದೇಶಕರಾಗಿ ನೇಮಿಸಲ್ಪಡುತ್ತಾರೆ. ಈ ಅಂಶಕ್ಕೆ ಉಪಬಂದವೇನೆಂದರೆ ನಾಮನಿರ್ದೇಶಿಸಲ್ಪಟ್ಟ ಯಾವ ವ್ಯಕ್ತಿಯು (ನಿರ್ಧಿಷ್ಟವಾಗಿ ಉಲ್ಲೇಖಿಸದಿದ್ದಲ್ಲಿ) 10 ಕಂಪನಿಗಳಿಗಿಂತ ಹೆಚ್ಚಿನ ನಿರ್ದೇಶಕರ ಮಂಡಳಿಯಲ್ಲಿ ಸದಸ್ಯರಾಗಿ ಇರತಕ್ಕದ್ದಲ್ಲ.

   ii) ಸರ್ಕಾರದ ಅನುಮೋದನೆ ಪಡೆದು ಉದ್ದಿಮೆಗಳಲ್ಲಿ ಖಾಸಗೀಕರಣ, ಪುನರ್ರಚನೆ ಮತ್ತು ಬಂಡವಾಳ ಹಿಂತೆಗೆದುಕೊಳ್ಳುವ ಕುರಿತಂತೆ ಸಾಮಾನ್ಯ ನೀತಿಯ ಮಾರ್ಗದರ್ಶಿ ಸೂತ್ರಗಳನ್ನು ರೂಪಿಸುವುದು.

   iii) ಸರ್ಕಾರದ ಅನುಮೋದನೆ ಪಡೆದು ಸಾರ್ವಜನಿಕ ಉದ್ದಿಮೆಗಳಿಗೆ ಸಂಬಂಧಿಸಿದಂತೆ ಹಣಕಾಸು ನಿರ್ವಹಣೆ, ವೇತನ ಒಪ್ಪಂದ, ಮಾನವ ಸಂಪನ್ಮೂಲ ಅಭಿವೃದ್ಧಿ ಮುಂತಾದ ವಿಷಯಗಳಲ್ಲಿ ನೀತಿಯ ಮಾರ್ಗದರ್ಶಿ ಸೂತ್ರಗಳನ್ನು ರೂಪಿಸುವುದು.

   iv) ಉನ್ನತ ಮಟ್ಟದ ಸಮಿತಿಯ ಪಾತ್ರದ ಕಾರ್ಯನಿರ್ವಹಣೆ , ಟಾಸ್ಕ್ ಪೋರ್ಸ್, ಎಂಒಯುಗಳ ಅನುಷ್ಠಾನ, ಎಲ್ಲಾ ಸಾರ್ವಜನಿಕ ಉದ್ದಿಮೆಗಳ ಉಸ್ತುವಾರಿಯನ್ನು ನೋಡಿಕೊಳ್ಳುವುದರ ಜೊತೆಗೆ ಸಾರ್ವಜನಿಕ ಉದ್ದಿಮೆಗಳು ಮತ್ತು ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ನಡುವಿನ ಎಂ.ಒ.ಯುಗಳನ್ನು ಕಾರ್ಯರೂಪಕ್ಕೆ ತರುವುದು.

   v) ಸಾರ್ವಜನಿಕ ಉದ್ದಿಮೆ ಮಂಡಳಿಗಳ ಸಭೆಗಳ ನಡವಳಿಕೆಗಳನ್ನು ಕ್ರಮವಾಗಿ ಪುನರಾವಲೋಕಿಸುವುದು ಮತ್ತು ಕಾರ್ಯ ಸಾಮರ್ಥ್ಯವನ್ನು ಮೌಲ್ಯಮಾಪನ ಮಾಡುವುದು.

   vi) ಪ್ರತಿವರ್ಷ ಆಯ್ದ ಸಾರ್ವಜನಿಕ ಉದ್ದಿಮೆಗಳ ಬಗ್ಗೆ ಆಳವಾಗಿ ಅಧ್ಯಯನ ಮಾಡುವುದು.

   vii) ಸಾರ್ವಜನಿಕ ಉದ್ದಿಮೆಗಳು : ಆಡಳಿತಾತ್ಮಕ ಇಲಾಖೆಗಳು ಮತ್ತಿತರೆ ಶಾಸನ ಸಮಿತಿಗಳು, ಭಾರತೀಯ ಲೆಕ್ಕ ಪರಿಶೋಧನೆ ಮತ್ತು ಲೆಕ್ಕ ಇಲಾಖೆ, ಭಾರತ ಸರ್ಕಾರದ ಇಲಾಖೆಗಳು ಮತ್ತು ಇತರೆ ರಾಜ್ಯಗಳ ಎಸ್.ಸಿ.ಓ.ಪಿ.ಇ. ಯಂಥ ಮಂಡಳಿಗಳ ನಡುವೆ (ಇಂಟರ್‌ಫೇಸ್) ಮಧ್ಯವಾಹಿಯಾಗಿ ಕಾರ್ಯ ನಿರ್ವಹಿಸುವುದು.

   viii) ಕೆಳಕಂಡ ವಿಷಯಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕ ಉದ್ದಿಮೆಗಳ ಇಲಾಖೆಯನ್ನು ಸಮಾಲೋಚಿಸತಕ್ಕದ್ದು.

- ಸಂಸ್ಥೆಯ ಜ್ಞಾಪನಪತ್ರ ಮತ್ತು ನಿಯಮಾವಳಿಗಳ ತಿದ್ದುಪಡಿ.
- ಸಾರ್ವಜನಿಕ ಉದ್ದಿಮೆಗಳ ಖಾಸಗೀಕರಣ : ಬಂಡವಾಳ ಹಿಂತೆಗೆದುಕೊಳ್ಳುವುದು : ಪುನರ್‌ಸಂಘಟನೆ : ಮರುವಸತಿ.
- ಬೋನಸ್ : ಗ್ರಾಚ್ಯುಟಿಯ ವಿತರಣೆ
- ವೇತನ ಪರಿಷ್ಕರಣೆ
- ಕನಿಷ್ಟವೇತನ ರೂ. 4700–00 ಕ್ಕಿಂತ ಹೆಚ್ಚಾಗಿರುವ ಹುದ್ದೆಗಳ ರಚನೆ.
- ಗುತ್ತಿಗೆ ಆಧಾರದ ಮೇಲಿನ ನೇಮಕಾತಿ.
- ಮಂಡಳಿಗಳ ನಿರ್ದೇಶಕರುಗಳ ಹಾಜರಿ ಶುಲ್ಕವನ್ನು (ಸಿಟ್ಟಿಂಗ್ ಫೀ) ನಿರ್ಧರಿಸುವುದು.
- ಉದ್ಯೋಗಿಗಳು, ಇತರ ಸಿಬ್ಬಂದಿಗಳು, ನಿರ್ದೇಶಕರುಗಳು, ಮುಖ್ಯಾಧಿಕಾರಿಗಳಿಗೆ ಸಂಬಂಧಿಸಿದ ಹೆಚ್ಚುವರಿ ಸಂಭಾವನೆ ಹಾಗೂ ಯಾವುದೇ ಹೊಸ ಕಲ್ಯಾಣ ಕಾರ್ಯಕ್ರಮಗಳ ಬಗ್ಗೆ ಸೂಚನೆಗಳನ್ನು ಹೊರಡಿಸುವುದು.
- ಸಾರ್ವಜನಿಕ ಉದ್ದಿಮೆಗಳ ಎಲ್ಲಾ ದರ್ಜೆಯ ಸಿಬ್ಬಂದಿಗಳ ವಿದೇಶ ಪ್ರವಾಸದ ಪ್ರಸ್ತಾವನೆಗಳು.

ix) ಸಾರ್ವಜನಿಕ ಉದ್ದಿಮೆಗಳಿಗೆ ಸಂಬಂಧಿಸಿದಂತೆ ಡಾಟಾ–ಬ್ಯಾಂಕ್‌ನಂತೆ ಕೆಲಸ ನಿರ್ವಹಿಸಿ ಕಾರ್ಯನಿರ್ವಾಹಕ ಅಧಿಕಾರಿಗಳ ಹುದ್ದೆಗಳಿಗೆ ಅಭ್ಯರ್ಥಿಗಳ ಪಟ್ಟಿ ತಯಾರಿಸುವುದು ಮತ್ತು ಸಾರ್ವಜನಿಕ ಉದ್ದಿಮೆಗಳ ಆಯ್ಕೆ ಮಂಡಳಿಗೆ ಬೇಕಾದ ಕಾರ್ಯನಿರ್ವಾಹಕ ಹುದ್ದೆಗಳ ಎಲ್ಲಾ ಸಾರ್ವಜನಿಕ ಉದ್ದಿಮೆಗಳಿಗೆ ಸೂಚಿಸುವುದು.

x) ಸಾರ್ವಜನಿಕ ಉದ್ದಿಮೆಗಳ ಕಾರ್ಯಗಳಿಗೆ ಸಂಬಂಧಿಸಿದಂತೆ ವಾರ್ಷಿಕ ಸಮೀಕ್ಷಾ ವರದಿಗಳನ್ನು ತಯಾರಿಸಿ ರಾಜ್ಯ ವಿಧಾನ ಸಭೆಯಲ್ಲಿ ಮಂಡಿಸುವುದು.

xi) ಸಿ.ಆ.ಸು.ಇಲಾಖೆ ಮತ್ತು ಯೋಜನಾ ಇಲಾಖೆಗಳು ಸರ್ಕಾರದ ಎಲ್ಲಾ ಇಲಾಖೆಗಳಿಗೆ ಕುರಿತು ಪಾತ್ರ ವಹಿಸುವಂತೆ, ಸಾರ್ವಜನಿಕ ಉದ್ದಿಮೆಗಳಿಗೆ ಸಚಿವಾಲಯವಾಗಿ ಕಾರ್ಯನಿರ್ವಹಿಸುವುದು.

xii) ಸಾರ್ವಜನಿಕ ಉದ್ದಿಮೆಗಳ ಸಿಬ್ಬಂದಿಗಳಿಗೆ ನಿರಂತರವಾಗಿ ತರಬೇತಿ ಕೋರ್ಸ್‌ಗಳನ್ನು ನಡೆಸುವುದು.

xiii) ಸರ್ಕಾರವು ಆಗಿಂದಾಗ್ಗೆ ವಹಿಸುವ ಇತರೆ ಕರ್ತವ್ಯಗಳನ್ನು ನಿರ್ವಹಿಸುವುದು.

4. ಸಾರ್ವಜನಿಕ ಉದ್ದಿಮೆಗಳು ತಮ್ಮ ಪ್ರಸ್ತಾವನೆಗಳನ್ನು ಸಂಬಂಧಿಸಿದ ಆಡಳಿತ ಇಲಾಖೆಗಳ ಮೂಲಕವೇ ಸಾರ್ವಜನಿಕ ಉದ್ದಿಮೆಗಳ ಇಲಾಖೆಗೆ ಕಳುಹಿಸಬೇಕು. ಆನಂತರ ಆಡಳಿತ ಇಲಾಖೆಗಳು ಪ್ರಸ್ತಾವಗಳನ್ನು ಸಂಬಂಧಿಸಿದ ಇಲಾಖೆಯ ಕಾರ್ಯದರ್ಶಿಯವರ ಅನುಮೋದನೆಯೊಂದಿಗೆ ತಮ್ಮ ಸಲಹೆ ಮತ್ತು ಅಭಿಪ್ರಾಯಗಳೊಂದಿಗೆ ಕರ್ನಾಟಕ ರಾಜ್ಯ ಉದ್ದಿಮೆಗಳ ಮಹೋದ್ಯಮಕ್ಕೆ ಕಳುಹಿಸತಕ್ಕದ್ದು.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**JA. J¸ï. ²ªgÁªïï**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಸೇವೆಗಳು–3)

## Personnel and Administrative Reforms Secretariat

**SUBJECT :** Functions and powers of Department of Public Enterprises.

**READ :**
1. G.O. No.C1 204 ICS 79 dated: 5-1-1979.
2. DPAR 654 SGD 80 Bangalore dated: 7-7-1980.
3. DPAR(BPE) SBD 81 dated: 03-03-1981.
4. DPAR(BPE) 15 MEA 82 dated: 09-02-1982.
5. DPAR(BPE) SPU 83 dated: 07-09-1983.
6. DCA/M/248 dated: 21-12-1997.
7. Notification No. DCA 3 ARB 2004, dtd. 24-3-05.
8. Circular No. DPAR(BPE) 26 SPU 97,dtd. 29-3 97.
9. Minutes of the meeting held on 17-08-2007.
10. Circular No. DPE 13 ARU 2007(P), Dated: 7-9-2007

**PREAMBLE :**

The role of Department of Public Enterprises has been carried forward from the then Department of Disinvestment and Public Enterprises Reforms(DDPER) which was performing the functions of earlier KSBPE. It has been found necessary to reiterate the functions and

powers of Department of Public Enterprises vis-a-vis Administrative Department and State Public Sector Enterprises(PSEs). Hence the following Order.

**Government Order No: DPAR 538 SA A SE 2007, Bangalore, Dated 13th March, 2008.**

The Department of Public Enterprises is entrusted with following duties and responsibilities in matters pertaining to working of State Public Sector Enterprises.

1. All matters/subjects allocated vide Rule P of Schedule II of Karnataka Government (Allocation of Business) Rules, 1977 and its amendments.
2. In terms of 72B of the Karnataka Government (Transaction of Business) Rules, 1977, all Administrative Departments shall consult the Department of Public Enterprises on any proposal specified below, before soliciting the approval of the Cabinet or otherwise.
   (i) Creation of new Corporations or Companies either wholly owned or partially financed by the State Government or by Public Sector Undertakings.
   (ii) Participation by the State Government or a Public Sector Undertaking, other than the Karnataka State Industrial investment and Development Corporation and the Karnataka State Financial Corporation, in providing Share Capital to a new or an existing Corporation or Company.
   (iii) Providing share capital exceeding Rupees Fifty lakhs by the Karnataka State Industrial Investment and Development Corporation and the Karnataka State Financial Corporation to a new or an existing Corporation or Company.
   (iv) Winding up, amalgamation or such other major schemes of structural re-organization of Public Sector Undertakings.
   (v) Increase in capital cost estimates of State owned Public Corporation, Companies enterprises and projects where such increase is more than twenty percent or Rupee twenty five lakhs whichever is less.
3. (i) The DPE as an arm of the Government shall function as an overseeing, co-ordinating and monitoring authority in respect of matters relating to functioning of PSEs with a view to guide the PSEs in various issues. The Principal Secretary, DPE or his nominee not below the rank of Deputy Secretary, shall be nominated unless otherwise specifically decides as director on each of the Boards of PSEs, provided that no individual shall be a director on more then ten companies at a given time.
   (ii) Lay down, with the approval of Government general policy relating to privatization, restructuring of PSEs.
   (iii) Formulation of policy guidelines with DPE approval regarding financial management, wage settlement, Human Resource Development, Performance appraisals etc in the respect of PSEs.
   (iv) Execution of MOUs between PSEs and DPE in addition to the performing the role of **HPC, task force, implementation of MOUs, monitoring of all the PSEs.**
   (v) Review regularly the proceedings of Board Meetings and evaluate performance of PSEs.
   (vi) Undertake every year in-depth study of selected PSEs.
   (vii) Function as interface between PSEs/Administrative Departments and other bodies like Legislature Committees, Indian Audit and Accounts Department, Departments of Government of India and other State Public Sector Enterprises etc.

(viii) The DPE shall be consulted on matters relating to :

i. Amendments to memorandum and articles and Association.
ii. Privatization/disinvestments/reorganization/ rehabilitation proposals of PSEs.
iii. Disbursement of bonus/gratuity.
iv. Revision of pay scales.
v. Creation of Posts where minimum of scale is Rs.4,700 and above.
vi. Appointment of Officials on contract basis.
vii. Fixing of sitting fees for Directors of Boards
viii. Instructions of any new welfare measures/perquisites to officials/non-officials CEOs, Directors, other officials and employees.
ix. Foreign Travel proposals of PSE Officials of all status

(ix) Function as a data bank in respect of PSEs regarding empanelment of candidates for executive posts/circulate among PSEs requirement of Public Enterprises Selection Board for Executive posts. DPE should be consulted in appointment of Board of Directors.

(x)Bring out annual Survey Reports on the performance of PSEs and cause it placed before the state legislature.

(xi) Function as Secretariat for all State PSEs i.e. performing similar role of DPAR and Planning Departments for all Government Departments.

(xii) Conduct regular training courses for personnel of PSEs.

(xiii) Any other duties that may be entrusted by Government from time to time.

4. The PSEs as a rule shall route their proposals to the DPE only through their respective Administrative Departments. The Administrative Departments shall in turn forward the proposals with their considered view/suggestions to DPE with the approval of Principal Secretary/Secretary of the concerned Department.

By Order and in the name of the President of India,

**M. S. SHIVARAM**

P.R. 449

Under Secretary to Government

D.P.A.R. (Services-III)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯಲ್ಲಿನ ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡರ್ ಯೋಜನೆಗೆ ಮಂಜೂರಾಗಿರುವ ಕಾರ್ಯದರ್ಶಿ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:–** 1. ಸರ್ಕಾರದ ಆದೇಶ ಸಂಖ್ಯೆಃಸಿಆಸುಇ 77 ಸಸಿಪಿ 06 ದಿನಾಂಕಃ07–11–2006.

2. ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಬಿ.ಎಂ.ಐ.ಸಿ.ಪಿ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆಃಲೋಇ 53 ಸಿಆರ್‌ಎಂ 07 ದಿನಾಂಕಃ06–08–2007.

3. ಅನಧಿಕೃತ ಟಿಪ್ಪಣಿ ಸಂಖ್ಯೆಃಪಿಡಬ್ಲ್ಯೂಡಿ 59 ಸಿಆರ್‌ಎಂ 2007 ದಿನಾಂಕಃ11–02–2008.

4. ಅನಧಿಕೃತ ಟಿಪ್ಪಣಿ ಸಂಖ್ಯೆಃಡಿಪಿಎಆರ್ 674 ಎಸ್‌ಎಎಸ್ 2007(ಪಿ) ದಿನಾಂಕಃ18–01–2008.

**ಪ್ರಸ್ತಾವನೆಃ–**

ಮೇಲೆ (1) ರಲ್ಲಿ ಓದಲಾಗಿರುವ ದಿನಾಂಕಃ07–11–2006ರ ಸರ್ಕಾರದ ಆದೇಶದಲ್ಲಿ ಸಚಿವಾಲಯದ ಲೋಕೋಪಯೋಗಿ ಇಲಾಖೆಯಲ್ಲಿನ ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡರ್ ಯೋಜನೆಯ ಸಮನ್ವಯ ಹಾಗೂ ಉಸ್ತುವಾರಿ ಕಾರ್ಯಕ್ಕಾಗಿ ಕಾರ್ಯದರ್ಶಿ ಹುದ್ದೆಯನ್ನೊಳಗೊಂಡಂತೆ ಈ ಕೆಳಕಂಡ ಹುದ್ದೆಗಳನ್ನು ದಿನಾಂಕಃ07–11–2006 ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಸೃಜಿಸಲಾಗಿತ್ತು. ಸದರಿ ಹುದ್ದೆಗಳು ಮುಂದುವರಿಯುವ ಅವಶ್ಯಕತೆ ಇದೆಯೆಂದು,

ಆದ್ದರಿಂದ 07–11–2007 ರಿಂದ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಮೇಲೆ (2) ಮತ್ತು (3) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಗಳಲ್ಲಿ ಲೋಕೋಪಯೋಗಿ ಇಲಾಖೆಯು (ಬಿ.ಎಂ.ಐ.ಸಿ.) ಕೋರಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ವೇತನ ಶ್ರೇಣಿ ರೂ.ಗಳಲ್ಲಿ | ಹುದ್ದೆಗಳ ಸಂಖ್ಯೆ |
|---|---|---|---|
| 1. | ಸರ್ಕಾರದ ಕಾರ್ಯದರ್ಶಿ (ಬಿ.ಎಂ.ಐ.ಸಿ.ಪಿ.) | | 1 ಹುದ್ದೆ |
| 2. | ಸರ್ಕಾರದ ಉಪ ಕಾರ್ಯದರ್ಶಿ (ಕಾನೂನು) (ಸಿವಿಲ್ ಜಡ್ಜ್) (ಹಿರಿಯ ಶ್ರೇಣಿ ವೃಂದದ ಅಧಿಕಾರಿಯನ್ನು ಕಾನೂನು ಇಲಾಖೆಯಿಂದ ತುಂಬಬಹುದು) | 12850–17550 (ಎಫ್ಎನ್‌ಜೆಪಿಸಿ ವೇತನ ಶ್ರೇಣಿ) | 1 ಹುದ್ದೆ |
| 3. | ಕಾರ್ಯಪಾಲಕ ಇಂಜಿನಿಯರ್ (ಲೋಕೋಪಯೋಗಿ ಇಲಾಖೆಯಿಂದ ನಿಯೋಜನೆ ಮೇಲೆ) | 9580–14200 | 1 ಹುದ್ದೆ |

**ಪೂರಕ ಸಿಬ್ಬಂದಿ ಹುದ್ದೆಗಳು:–**

| ಕ್ರ.ಸಂ. | ಹುದ್ದೆಯ ಹೆಸರು | ಕಾರ್ಯದರ್ಶಿ (ಬಿ.ಎಂ.ಐ.ಸಿ.ಪಿ.) | ಉಪ ಕಾರ್ಯದರ್ಶಿ (ಕಾನೂನು) | ಕಾರ್ಯಪಾಲಕ ಇಂಜಿನಿಯರ್ |
|---|---|---|---|---|
| 1. | ಪತ್ರಾಂಕಿತ ಆಪ್ತ ಸಹಾಯಕ/ ಹಿರಿಯ ಶೀಘ್ರಲಿಪಿಗಾರ | 02 | 01 | 01 |
| 2. | ಶಾಖಾಧಿಕಾರಿ/ಹಿರಿಯ ಸಹಾಯಕ | 01 | – | – |
| 3. | ಕಿರಿಯ ಸಹಾಯಕ | 01 | 01 | 01 |
| 4. | ವಾಹನ ಚಾಲಕ | 01 | – | – |
| 5. | ದಲಾಯತ್ | 02 | 01 | 01 |
| | ಒಟ್ಟು | 07 | 03 | 03 |

ಮೇಲೆ (4) ರಲ್ಲಿ ಓದಲಾದ ದಿನಾಂಕ:18–01–2008ರ ಅನಧಿಕೃತ ಟಿಪ್ಪಣಿಯಲ್ಲಿ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ (ಬಿ.ಎಂ.ಯ.ಸಿ.ಪಿ.) ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಆರ್.ಬಿ. ಝುಲ್ಕಿ ಇವರನ್ನು ಅಧಿಸೂಚನೆ ಸಂಖ್ಯೆ:ಡಿಪಿಎಆರ್ 674 ಎಸ್ಎಎಸ್ 2007 ದಿನಾಂಕ:04–01–2008 ರಲ್ಲಿ ವರ್ಗಾಯಿಸಲಾಗಿದ್ದರಿಂದ ಸದರಿ ಅಧಿಕಾರಿಯವರು ಕಾರ್ಯದರ್ಶಿಯ ಹುದ್ದೆಯಿಂದ ಬಿಡುಗಡೆ ಹೊಂದಿದ ದಿನಾಂಕದವರೆಗೆ ಮಾತ್ರ ಮುಂದುವರಿಸಲು ತಿಳಿಸಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 44 ಸಅಸೇ 2008, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯಲ್ಲಿನ ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡರ್ ಯೋಜನೆಗೆ ಮಂಜೂರಾಗಿರುವ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ:07–11–2007 ರಿಂದ 07–01–2008 ರವರೆಗೆ ಮುಂದುವರಿಸಿದೆ ಹಾಗೂ ಇನ್ನುಳಿದ ಹುದ್ದೆಗಳಾದ ಉಪ ಕಾರ್ಯದರ್ಶಿ (ಕಾನೂನು), ಕಾರ್ಯಪಾಲಕ ಇಂಜಿನಿಯರ್ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ:07–11–2007 ರಿಂದ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಮುಂದುವರಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–07–1996 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್.517

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸು ಇಲಾಖೆ (ಸೇವೆಗಳು–3).

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಯಲ್ಲಿನ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:– 1** ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 12 ಸಸಿವಿ 2007 ದಿನಾಂಕ:14–03–2007.

**2** ಸರ್ಕಾರದ ಕಾರ್ಯದರ್ಶಿ, ಸಿಆಸುಇ (ಆಡಳಿತ ಸುಧಾರಣೆ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 28 ಪ್ರಕಾ (ಆಸು) 2008 ದಿನಾಂಕ:03–03–2008.

**ಪ್ರಸ್ತಾವನೆ:–**

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಯಲ್ಲಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯೊಂದಿಗೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ತಾತ್ಕಾಲಿಕವಾಗಿ ವರ್ಷದಿಂದ

ವರ್ಷಕ್ಕೆ ಮುಂದುವರಿಸುತ್ತಾ ಬಂದಿದ್ದು, ಈ ಹುದ್ದೆಗಳನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕಃ14–03–2007ರ ಸರ್ಕಾರದ ಆದೇಶದಲ್ಲಿ ದಿನಾಂಕಃ 31–03–2008 ರವರೆಗೆ ಮುಂದುವರಿಸಲಾಗಿತ್ತು.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್–2)/ಪತ್ರಾಂಕಿತ ಆಪ್ತ ಸಹಾಯಕ | 1 ಹುದ್ದೆ |
| 2. | ಶೀಘ್ರಲಿಪಿಗಾರರು/ಹಿರಿಯ ಶೀಘ್ರಲಿಪಿಗಾರರು/ಪತ್ರಾಂಕಿತ ಆಪ್ತ ಸಹಾಯಕರು | 2 ಹುದ್ದೆಗಳು |
| 3. | ಭಾಷಾಂತರಕಾರರು (ಶಾಖಾಧಿಕಾರಿ/ಹಿರಿಯ ಸಹಾಯಕ) | 1 ಹುದ್ದೆ |
| 4. | ಸಹಾಯಕರು (ಹಿರಿಯ ಸಹಾಯಕ/ಸಹಾಯಕ) | 1 ಹುದ್ದೆ |
| 5. | ವಾಹನ ಚಾಲಕರು | 1 ಹುದ್ದೆ |
| 6. | ದಲಾಯತ್ | 2 ಹುದ್ದೆಗಳು |
| | ಒಟ್ಟು | 8 ಹುದ್ದೆಗಳು |

ಮೇಲ್ಕಂಡ ಹುದ್ದೆಗಳು ದಿಃ31–03–2008 ರಂದು ಮುಕ್ತಾಯಗೊಂಡಿರುವುದರಿಂದ ಈ ಹುದ್ದೆಗಳನ್ನು ದಿಃ01–04–2008 ರಿಂದ ಮುಂದುವರಿಸುವಂತೆ ಮೇಲೆ (2) ರಲ್ಲಿ ಓದಲಾದ ದಿನಾಂಕಃ03–03–2008ರ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಕಾರ್ಯದರ್ಶಿ, ಸಿಆಸು ಇಲಾಖೆ (ಆಡಳಿತ ಸುಧಾರಣೆ) ಇವರು ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 12 ಸಸಿವಿ 2007, ಬೆಂಗಳೂರು, ದಿನಾಂಕಃ 6ನೇ ಮೇ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ, ತರಬೇತಿ ಮತ್ತು ರಾಜಕೀಯ ವಿಶ್ರಾಂತಿ ವೇತನ) ಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯೊಂದಿಗೆ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕಃ01–04–2008 ರಿಂದ 31–03–2009 ರವರೆಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಆಪ್ತ ಕಾರ್ಯದರ್ಶಿ (ಆಪ್ತ ಕಾರ್ಯದರ್ಶಿ ಗ್ರೇಡ್–2)/ಪತ್ರಾಂಕಿತ ಆಪ್ತ ಸಹಾಯಕ | 1 ಹುದ್ದೆ |
| 2. | ಶೀಘ್ರಲಿಪಿಗಾರರು/ಹಿರಿಯ ಶೀಘ್ರಲಿಪಿಗಾರರು/ಪತ್ರಾಂಕಿತ ಆಪ್ತ ಸಹಾಯಕರು | 2 ಹುದ್ದೆಗಳು |
| 3. | ಭಾಷಾಂತರಕಾರರು (ಶಾಖಾಧಿಕಾರಿ/ಹಿರಿಯ ಸಹಾಯಕ) | 1 ಹುದ್ದೆ |
| 4. | ಸಹಾಯಕರು (ಹಿರಿಯ ಸಹಾಯಕ/ಸಹಾಯಕ) | 1 ಹುದ್ದೆ |
| 5. | ವಾಹನ ಚಾಲಕರು | 1 ಹುದ್ದೆ |
| 6. | ದಲಾಯತ್ | 2 ಹುದ್ದೆಗಳು |
| | **ಒಟ್ಟು** | **8 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10–07–1996 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 776

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3).

**«µAiÄ B** P£ÁðlP ¸PÁðg ¸aªÁ®AiÄz ¯ÆÃPÆÃ¥AiÆÃV E¯ÁSAiÄ ¸º PÁAiÄðz²ð ºÄzAiÄ£Ä ¥ÆgP ¹§A¢ ºÄzU¼ÆA¢U ªÄÄAzÄªg¸Äª §U.

**Nz¯ÁVz B** 1) ¸PÁðj DzÃ± ¸ASå ¹D¸ÄE 16 ¸¹« 97, ¢£ÁAP 4-7-1997.

2) ¸PÁðj DzÃ± ¸ASå ¹D¸ÄE 56 ¸¹« 2006,¢£ÁAP 22-8-2006.

3) C£¢Pv n¥tÂ ¸ASå ¯ÆÃE 447 ¸Ã¸J 2007, ¢£ÁAP 5-12-2007.

**¥ï¸Áª£ B**

ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯಲ್ಲಿ ತಾಂತ್ರಿಕ ವಿಷಯಗಳನ್ನು ಕೂಲಂಕಷವಾಗಿ ವಿಮರ್ಶಿಸಲು ಅನುವಾಗುವಂತೆ ಮೇಲೆ (1)ರಲ್ಲಿ ಓದಲಾದ ದಿನಾಂಕ 4–7–1997ರ ಸರ್ಕಾರಿ ಆದೇಶದಲ್ಲಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿತ್ತು / ಮಂಜೂರು ಮಾಡಲಾಗಿತ್ತು.

1) ಸಹ ಕಾರ್ಯದರ್ಶಿ – 01 ಹುದ್ದೆ

2) ಅಧೀನ ಕಾರ್ಯದರ್ಶಿ (ಇಪಿ) ಎ.ಇ.ಇ. – 01 ಹುದ್ದೆ

3) ಸಹಾಯಕ ಇಂಜಿನಿಯರ್ – 04 ಹುದ್ದೆಗಳು

| | | |
|---|---|---|
| 4) ಕಿರಿಯ ಇಂಜಿನಿಯರ್ | – | 2 ಹುದ್ದೆಗಳು |
| 5) ಕಿರಿಯ ಸಹಾಯಕ / ದ್ವಿತೀಯ ದರ್ಜೆ ಸಹಾಯಕ | – | 2 ಹುದ್ದೆಗಳು |
| 6) ಬೆರಳಚ್ಚುಗಾರರು | – | 2 ಹುದ್ದೆಗಳು |
| 7) ದಲಾಯತ್ | – | 2 ಹುದ್ದೆಗಳು |
| | **ಒಟ್ಟು** | **– 14 ಹುದ್ದೆಗಳು** |

ಮೇಲಿನ ಹುದ್ದೆಗಳು ಕಾಲಕಾಲಕ್ಕೆ ಮುಂದುವರೆಸಲ್ಪಟ್ಟು ಅಂತಿಮವಾಗಿ ಮೇಲೆ (2)ರಲ್ಲಿ ಓದಲಾದ ದಿನಾಂಕ 22–8–2006ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಗಳನ್ನು 3–7–2007ರವರೆಗೆ ಮುಂದುವರೆಸಲಾಗಿತ್ತು. ಇವುಗಳನ್ನು ದಿನಾಂಕ 4–7–2007ರಿಂದ ಮುಂದುವರೆಸುವಂತೆ ಲೋಕೋಪಯೋಗಿ ಇಲಾಖೆಯು ಮೇಲೆ (3)ರಲ್ಲಿ ಓದಲಾದ ದಿನಾಂಕ 5–12–2007ರ ಅನಧಿಕೃತ ಟಿಪ್ಪಣಿಯಲ್ಲಿ ಕೋರಿದೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 697 ಸಅಸೇ 2007, ಬೆಂಗಳೂರು, ದಿನಾಂಕ 25ನೇ ಮಾರ್ಚ್ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯಲ್ಲಿ ತಾಂತ್ರಿಕ ವಿಷಯಗಳನ್ನು ಕೂಲಂಕಷವಾಗಿ ಪರಿಶೀಲಿಸಲು ಸೃಜಿಸಲಾಗಿದ್ದ / ಮಂಜೂರು ಮಾಡಲಾಗಿದ್ದ ಈ ಕೆಳಕಂಡ ಹುದ್ದೆಗಳನ್ನು ಸರ್ಕಾರವು ದಿನಾಂಕ 4–7–2007ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸುತ್ತದೆ.

| | | |
|---|---|---|
| 1) ಸಹ ಕಾರ್ಯದರ್ಶಿ | – | 01 ಹುದ್ದೆ |
| 2) ಅಧೀನ ಕಾರ್ಯದರ್ಶಿ (ಇಎಪಿ) ಎ.ಇ.ಇ. | – | 01 ಹುದ್ದೆ |
| 3) ಸಹಾಯಕ ಇಂಜಿನಿಯರ್ | – | 04 ಹುದ್ದೆಗಳು |
| 4) ಕಿರಿಯ ಇಂಜಿನಿಯರ್ | – | 2 ಹುದ್ದೆಗಳು |
| 5) ಕಿರಿಯ ಸಹಾಯಕ / ದ್ವಿತೀಯ ದರ್ಜೆ ಸಹಾಯಕ | – | 2 ಹುದ್ದೆಗಳು |
| 6) ಬೆರಳಚ್ಚುಗಾರರು | – | 2 ಹುದ್ದೆಗಳು |
| 7) ದಲಾಯತ್ | – | 2 ಹುದ್ದೆಗಳು |
| **ಒಟ್ಟು** | **–** | **14 ಹುದ್ದೆಗಳು** |

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎಸ್. ಶಿವರಾಮ್**

ಪಿ.ಆರ್. 532

ಸರ್ಕಾರದ ಅಧೀನ ಕಾರ್ಯದರ್ಶಿ

ಸಿ.ಆ.ಸು. ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ವಿಷಯ**: ಶ್ರೀ ಹೆಚ್.ಎಸ್. ವಡ್ಡರ್, ಹೆಚ್‌ಸಿ–789, ಕಲಘಟಗಿ ಪೊಲೀಸ್ ಠಾಣೆ, ಧಾರವಾಡ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ**: 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಧಾರವಾಡ ಜಿಲ್ಲೆ, ಧಾರವಾಡ ಇವರ ಆದೇಶ ಸಂಖ್ಯೆ: ಸಿಬ್ಬಂದಿ–6/ಶಿಕ್ಷೆ–7/2003–04, ದಿನಾಂಕ: 21–4–2005.

2) ಮೇಲ್ಮನವಿ ಪ್ರಾಧಿಕಾರಿ ಮತ್ತು ಆರಕ್ಷಕ ಮಹಾನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ: ಅಪೀಲು/24/ಉವ/2005, ದಿನಾಂಕ 3–10–2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 12–04–2006.

4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/55/2006–07, ದಿನಾಂಕ: 10–07–2006.

5) ಕರ್ನಾಟಕ ಲೋಕ ಸೇವಾ ಅಯೋಗದ ಪತ್ರ ಸಂಖ್ಯೆ: PSC 184 CNS 2007, ದಿನಾಂಕ 8–2–2008.

**ಪ್ರಸ್ತಾವನೆ:**

ಹೆಚ್.ಎಸ್. ವಡ್ಡರ್, ಹೆಚ್‌ಸಿ–789, ಕಲಘಟಗಿ ಪೊಲೀಸ್ ಠಾಣೆ, ಧಾರವಾಡ ಜಿಲ್ಲೆ, ಧಾರವಾಡ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:–**

1) ಶ್ರೀ ಹೆಚ್.ಎಸ್. ವಡ್ಡರ್, ಹೆಚ್‌ಸಿ–789, ಕಲಘಟಗಿ ಪೊಲೀಸ್ ಠಾಣೆ, ಧಾರವಾಡ ಜಿಲ್ಲೆ, ಧಾರವಾಡ ನೀವು ದಿನಾಂಕ 20–07–2003ರ 17–30 ಗಂಟೆಗೆ ಬಾದಾಮಿ ಪೊಲೀಸ್ ಠಾಣೆಗೆ ಹೋಗಿ ಠಾಣೆಯಲ್ಲಿ ಕರ್ತವ್ಯದ ಮೇಲೆ

ಹಾಜರಿದ್ದ ಸಿಎಚ್‌ಸಿ–805 ಎಸ್.ಆರ್. ಮನಗೂಳಿ, ಸೆಂಟ್ರಿ ಕರ್ತವ್ಯದಲ್ಲಿದ್ದ ಪಿಸಿ–1020 ಡಿ.ಡಿ. ಧೂಳಖೇಡ, ಠಾಣೆಯಲ್ಲಿದ್ದ ಪಿಸಿ–563 ಎಸ್.ಟಿ. ಜೋಶಿ ಮತ್ತು ಎಲ್.ಎಂ. ವಾಲಿಕಾರ, ಎ.ಎಸ್.ಐ. ಇವರೊಂದಿಗೆ ಸಿ.ಆರ್. ನಂ. 106/203, ಕಲಂ 324, 504, ಐಪಿಸಿ, ಎಫ್.ಐ.ಆರ್‌ಗೆ ಸಂಬಂಧಿಸಿದಂತೆ ಮೇಲ್ಕಾಣಿಸಿದ ಸಿಬ್ಬಂದಿ ಜನರಿಗೆ ಕರ್ತವ್ಯ ನಿರ್ವಹಿಸಲು ಅಡೆತಡೆ ಮಾಡಿ ದುರ್ವರ್ತನೆ ಪ್ರದರ್ಶಿಸಿರುವುದು ಮತ್ತು ಎಸ್.ಎಚ್.ಓ, ಹೆಚ್‌ಸಿ–805 ಎಸ್.ಆರ್. ಮನಗೂಳಿ ಇವರಿಗೆ ನೀವು ನಮ್ಮ ತಮ್ಮನನ್ನು ಏಕೆ ಬಂದಿಸಿದಿರಿ ಅಂತಾ ಅವಾಚ್ಯ ಶಬ್ದಗಳಿಂದ ಬೈದಾಡಿ ಅಸಭ್ಯ ರೀತಿಯಿಂದ ವರ್ತಿಸಿ ಸರ್ಕಾರಿ ಕರ್ತವ್ಯಕ್ಕೆ ಅಡ್ಡಿ ಪಡಿಸಿರುತ್ತೀರಿ ಹಾಗೂ ನಿಮ್ಮ ಮೇಲೆ ಬಾದಾಮಿ ಪಿ.ಎಸ್.ಸಿ.ಆರ್. ನಂ. 107/2003, ಕಲಂ 353, 504 ಐಪಿಸಿ ಗುನ್ನೆ ದಾಖಲಾಗಿ ದಿನಾಂಕ 20–7–03 ರಂದು 1730 ಸುಮಾರಿಗೆ ದಸ್ತಗಿರಿ ಆಗಿ ಮಾನ್ಯ ನ್ಯಾಯಾಲಯದಿಂದ 1930 ಗಂಟೆಗೆ ಸ್ವಂತ ಜಾಮೀನು ಮೇಲೆ ಬಿಡುಗಡೆ ಹೊಂದಿ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿ ಅಶಿಸ್ತಿನಿಂದ ವರ್ತಿಸಿ ಘೋರ ಅಶಿಸ್ತು ಪ್ರದರ್ಶಿಸಿದ್ದೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ಆ.ಪೊ.ಅ ಮೇಲಿನ ಆಪಾದನೆಗಳ ಬಗ್ಗೆ ವಿಚಾರಣಾಧಿಕಾರಿಗಳು ವಿಚಾರಣೆ ಕಾಲಕ್ಕೆ ಸಂಗ್ರಹಿಸಲಾದ ಸಾಕ್ಷ್ಯಾಧಾರಗಳ ಮೇಲಿಂದ ಹಾಗೂ ಪ್ರದರ್ಶಿಸಲಾದ ದಾಖಲಾತಿಗಳ ಆಧಾರದ ಮೇಲಿಂದ ಆಪಾದನೆಯು ದೃಢ ಪಟ್ಟಿರುವುದರಿಂದ ಹಾಗೂ ಕಾರಣ ಕೇಳುವ ಸೂಚನಾ ಪತ್ರದಲ್ಲಿ ಪ್ರಸ್ತಾವಿಸಿದ ಘೋರ ಶಿಕ್ಷೆಯು ಉಚಿತವಾಗಿದ್ದರೂ ಸಹಿತ ಮಾನವೀಯ ದೃಷ್ಟಿಯಿಂದ ಸಹಾನುಭೂತಿ ತೋರಿ ಪ್ರಸ್ತಾವಿತ ಶಿಕ್ಷೆಯನ್ನು ಮಾರ್ಪಡಿಸಿ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಧಾರವಾಡ ಜಿಲ್ಲೆ, ಧಾರವಾಡ ರವರು ಶ್ರೀ ಹೆಚ್.ಎಸ್. ವಡ್ಡರ, ಸಿಹೆಚ್‌ಸಿ–789ರವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಪರಿಣಾಮ ಬೀರುವಂತೆ ಮೂರು ವರ್ಷ ಕಾಲ ಮುಂದೂಡಲಾಗಿದೆ ಎಂದು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 21–4–2005ರಲ್ಲಿ ಆದೇಶಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿ ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ರವರು ಶಿಸ್ತು ಪ್ರಾಧಿಕಾರಿಯವರ ಆದೇಶವನ್ನು ಎತ್ತಿ ಹಿಡಿದು ಶ್ರೀ ಹೆಚ್.ಎಸ್. ವಡ್ಡರ, ಸಿಹೆಚ್‌ಸಿ–789, ರವರ ಮೇಲ್ಮನವಿಯನ್ನು ತಿರಸ್ಕರಿಸಿ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 3–10–2005ರಲ್ಲಿ ಆದೇಶಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿ ಪರಿಶೀಲಿಸಲಾಗಿ, ಆ.ಪೊ.ಅ ರವರು ಬಾದಾಮಿ ಪೊಲೀಸ್ ಠಾಣೆಗೆ ಹೋಗಿ ಅಲ್ಲಿನ ಸಿಬ್ಬಂದಿ ವರ್ಗದವರೊಂದಿಗೆ ಅಹಿತಕರವಾಗಿ ನಡೆದುಕೊಂಡು ಕೆಲಸ ಕಾರ್ಯಗಳಿಗೆ ಅಡೆತಡೆ ಮಾಡಿದರು ಎಂಬುವ ಆರೋಪವಿದ್ದು. ಈ ಆರೋಪಕ್ಕೆ ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನೆ ಹೆಚ್ಚಿನದಾಗಿದ್ದು, ಸದರಿ ಆರೋಪವು ಅಂತಹ ಗಂಭೀರ ಸ್ವರೂಪದಾಗಿಲ್ಲದಿರುವುದರಿಂದ, ಶಿಸ್ತು ಪ್ರಾಧಿಕಾರದ ಶಿಕ್ಷೆಯನ್ನು ಮಾರ್ಪಡಿಸಿ ಆ.ಪೊ.ಅ. ರವರಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 1 (ಒಂದು) ವರ್ಷ ಕಾಲ ಪರಿಣಾಮ ಬೀರದಂತೆ ಮುಂದೂಡುವಂತೆ ಪರಿಗಣಿಸಲು ಸರ್ಕಾರ ನಿರ್ಧರಿಸಿದೆ, ಇದನ್ನು ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆಗಾಗಿ ಕೋರಲಾಗಿದ್ದು. ಆಯೋಗವು ದಿನಾಂಕ 8–2–2008ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 464 ಪೊಸಿಅ 2006, ಬೆಂಗಳೂರು, ದಿ: 01ನೇ ಮಾರ್ಚ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣೆ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಶ್ರೀ ಹೆಚ್.ಎಸ್. ವಡ್ಡರ್, ಹೆಚ್‌ಸಿ–789, ಕಲಘಟಗಿ ಪೊಲೀಸ್ ಠಾಣೆ, ಧಾರವಾಡ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 1(ಒಂದು) ವರ್ಷ ಕಾಲ ಪರಿಣಾಮ ಬೀರದಂತೆ ಮುಂದೂಡುವುದು ಎಂದು ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರ ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 184 ಸಿಎನ್‌ಎಸ್ 2007, ದಿನಾಂಕ 8–2–2008ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 417

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)